# ಕಾಲರಾ








ರೋಗವನ್ನು ತಿಳಿದು
ನಿರೋಗಿಯಾಗಿ ಬಾಳು

ಆರೋಗ್ಯ ವಿಜ್ಞಾನ ಗ್ರಂಥ ಮಾಲೆ-6

ರೋಗವನ್ನು ತಿಳಿ, ನಿರೋಗಿಯಾಗಿ ಬಾಳಿ,

# ಸಾಂಕ್ರಾಮಿಕ ರೋಗ
# ಕಾಲರಾ

ಲೇಖಕರು :

ಎಸ್. ಜಿ. ಹಲ್ಲಾಪೂರ



Rs. 8-00

ಪಾರು ಪ್ರಕಾಶನ, ಗದಗ.

# ವಿಷಯ ಸೂಚಿ

# ನನ್ನೆರಡು ನುಡಿಗಳು

ಆರೋಗ್ಯ ವಿಜ್ಞಾನ ಮಾಲೆಯ ಆರನೆಯ ಪುಸ್ತಕ ಹೊರಬರುತ್ತಿರುವುದು ಸಂತೋಷದ ವಿಷಯ. ಆರೋಗ್ಯ ಜ್ಞಾನ ಪ್ರಸಾರ ಕೈಗೊಂಡಿರುವ ಈ ಗ್ರಂಥ ಮಾಲೆ ರಾಜ್ಯದಾದ್ಯಂತ ಮನೆ-ಮನೆಗಳನ್ನು ಸೇರಿ ಜನ ಸಾಮಾನ್ಯರಿಗೆ ರೋಗದ ತಿಳಿವನ್ನು, ರೋಗದ ಲಕ್ಷಣಗಳು, ಮುಂಜಾಗರೂಕತೆ ಕ್ರಮಗಳು, ರೋಗ ತಡೆಗಟ್ಟುವ ವಿಧಾನಗಳನ್ನು ತಿಳಿಯುವಂತೆ ಸಹಕರಿಸಿವೆ. ಆಗಮಿತ ವಿವಿಧ ರೋಗಗಳಿಂದ ದೂರವಿರಲು ನಾಂದಿಯಾಗಿ ಈ ಪುಸ್ತಕಗಳು, ಈ ಪುಸ್ತಕಗಳಲ್ಲಿಯ ವಿಷಯ ಸಹಾಯಮಾಡುತ್ತದೆ.

ಭಾರತದಲ್ಲಿ ಹಳ್ಳಿಗಳೇ ಬಹಳ, ಭಾರತಕ್ಕೆ ಅನಂತ ಸಮಸ್ಯೆಗಳು. ನಿರುದ್ಯೋಗ, ಬಡತನ, ಅಜ್ಞಾನ, ಏರುತ್ತಿರುವ ಜನಸಂಖ್ಯೆ ಮುಂತಾದ ಸಮಸ್ಯೆಗಳು ಅಭಿವೃದ್ಧಿಯನ್ನು ಕುಂಠಿತಗೊಳಿಸುತ್ತವೆ. ಮನುಷ್ಯರು ಭೌತಿಕವಾಗಿಯೂ, ಮಾನಸಿಕವಾಗಿಯೂ ಆರೋಗ್ಯಶೀಲರಾಗಿದ್ದರೆ ಮಾತ್ರ ಆಗಮಿಸಿದ ಸಮಸ್ಯೆಗಳನ್ನು ನಿರಾತಂಕವಾಗಿ ಬಿಡಿಸಲು ಸಮರ್ಥರಾಗುತ್ತಾರೆ. ರೋಗಗಳ ವಿರುದ್ಧ ಹೋರಾಟ ನಡೆಸುತ್ತಾರೆ. ಹೊಸ ಹೊಸ ಸಂಶೋಧನೆಗಳು ಹೊರಬರುತ್ತವೆ. ನವೀನ ಉಪಚಾರ ಪದ್ಧತಿಗಳು ತಿಳಿದುಬರುತ್ತವೆ.

ಹಲವಾರು ವರ್ಷಗಳ ಹಿಂದೆಯೇ ಊರಿಗೆ ಊರೇ ನಾಶವಾಗುವಂತೆ ಮಾಡುತ್ತಿದ್ದ ಸಾಂಕ್ರಾಮಿಕ ರೋಗಗಳಾದ ಕಾಲರಾ, ಪ್ಲೇಗಗಳಂತಹ ಭೀಕರ ರೋಗಗಳನ್ನು ನಿಯಂತ್ರಿಸಲಾಗಿದೆ. ಮೈಲಿ ಬೇನೆ ಹೊರಟು ಹೋದಂತಾಗಿದೆ. ನಶಿಸಿಹೋದ ಸಾಂಕ್ರಾಮಿಕ ರೋಗಗಳು ಮತ್ತೆ ಬಾರದೇ ಇರುವಂತೆ ನೋಡಿಕೊಳ್ಳುವುದು ನಮಗೊಂದು ಸಮಸ್ಯೆಯಾಗಬಾರದು. ಮುಂದುವರಿದ ರಾಷ್ಟ್ರಗಳಾದ ಇಂಗ್ಲೆಂಡ್, ಅಮೇರಿಕಾ, ಜರ್ಮನಿ, ಜಪಾನದಂತಹ ದೇಶಗಳು ಆರೋಗ್ಯದ ನಿಯಮಗಳನ್ನು ಅನುಸರಿಸಿ ತೀವ್ರತರವಾದ ರೋಗಗಳಿಂದ ಎಚ್ಚರದಿಂದಿ

ಪ್ಪಾದ್ದರೆ. ಭಾರತ ಈ ದಿಶೆಯಲ್ಲಿ ಹಿಂದೆ ಬೀಳಬಾರದು. ಭಾರತದ ಜನತೆ ಭೀಕರ ರೋಗಗಳಿಂದ ಬಳಲುವಂತಾಗಬಾರದು. ಸಮಸ್ಯೆಗಳಿಗೆ ಪರಿಹಾರಗಳಿವೆ ಎಂಬಂತೆ ಪ್ರಾಮಾಣಿಕ ಪ್ರಯತ್ನ ನಡೆದರೆ, ಆ ಬಗ್ಗೆ ಜನತೆಯ ತಿಳುವಳಿಕೆಯ ಮಟ್ಟ ಹೆಚ್ಚಿದರೆ ರೋಗದಿಂದ ರಕ್ಷಿತವಾಗುವುದು ಅಷ್ಟೇನು ಕಷ್ಟಕರವಾದ ವಿಷಯ ವೇನಲ್ಲ. ಈ ಗ್ರಂಥ ಮಾಲೆಯಿಂದ ಜನರಲ್ಲಿ ಆರೋಗ್ಯದ ಪ್ರಜ್ಞೆ ಮೂಡಿ ಬಂದರೆ ಸಾಕು.

ಎಸ್. ಜಿ. ಹಲರ್ಾಪೂರ



# ಕಾಲರಾ

**ಪ್ರಸ್ತಾವನೆ :**

(ಕಾಲರಾ ಒಂದು ಸಾಕ್ರಾಮಿಕ ರೋಗ,)ಸಾಂಸರ್ಗಿಕ ರೋಗ,ಸಾಂಕ್ರಾಮಿಕ ರೋಗಗಳಾದ ಕಾಲರಾ ವ್ಯಕ್ತಿಗತವಾಗಿರುವುದಿಲ್ಲ. ಅಂದರೆ ಒಂದು ಊರಲ್ಲಿ ಒಂದು ಮನೆತನದಲ್ಲಿ, ಒಬ್ಬನಿಗೆ ಬಂದಿತೆಂದರೆ ಅವನೊಬ್ಬನನ್ನೆ ಔಷದೋಪಚಾರಗಳಿಂದ ಉಪಚರಿಸಿದರಾಯಿತೆಂದು ಕೊಳ್ಳುವಂತಿಲ್ಲ. ಇಂದು ಒಬ್ಬನಿಗೆ ಮರುದಿನ ಮನೆಮಂದಿಗೆ ನಂತರ ಊರು, ಕೇರಿ, ಪ್ರದೇಶಗಳಲ್ಲಿ ಈ ಸಾಂಕ್ರಾಮಿಕ ರೋಗ ಹರಡುತ್ತ ಸಾಗುತ್ತದೆ. ನಿಯಂತ್ರಣದಲ್ಲಿ ಇರಿಸದಿದ್ದರೆ ದಿನದಿನಕ್ಕೆ ಸಾವು, ನೋವುಗಳು ಹೆಚ್ಚುತ್ತಾ ಸಾಗುತ್ತವೆ. ಅದರಲ್ಲೂ ರೋಗದ ತಿಳುವಳಿಕೆ ಇಲ್ಲದಿದ್ದಲ್ಲ ಇನ್ನೂ ಪರಿಸ್ಥಿತಿ ಭೀಕರಗೊಳ್ಳುತ್ತದೆ. ಕಾರಣ ಸಾಂಸರ್ಗಿಕ ರೋಗವಾದ ಕಾಲರಾದ ಬಗೆಗೂ, ಅದನ್ನು ತಡೆಗಟ್ಟುವ ವಿಧಾನಗಳ ಬಗೆಗೂ ನಮ್ಮ ಜನರ ಅವಶ್ಯಕವಾಗಿ ಅರಿತವರಾಗಿರಬೇಕಾಗುತ್ತದೆ.

ಕಾಲರಾ ರೋಗಕ್ಕೆ ಬಲಿಯಾದವರಿಗೆ ವಿಪರೀತ ವಾಂತಿಯಾಗುತ್ತದೆ ಇದರೊಂದಿಗೆ ಭೇದಿಯೂ ಆಗುತ್ತದೆ. ಭೇದಿಯಾಗುವಾಗ ನೋವಿರುವುದಿಲ್ಲ. ಭೇದಿ ಅಕ್ಕಿ ತೊಳೆದ ನೀರಿನಂತೆ ಪದೆ ಪದೆ ಆಗುತ್ತಿರುತ್ತದೆ. ಇವೇ ಈ ರೋಗದ ಪ್ರಮುಖ ಲಕ್ಷಣಗಳು. ರೋಗಿಯಲ್ಲಿ ಈ ಪ್ರಾರಂಭಿಕ ಲಕ್ಷಣಗಳು ಕಂಡು ಬಂದರೆ ಮನೆಯಲ್ಲಿಯೇ ಅಂತಿಂಥ ಮದ್ದುಗಳನ್ನು ಕೊಟ್ಟು ಉಪಚರಿಸುವುದಕ್ಕಿಂತ ಬೇಗನೆ ವೈದ್ಯರನ್ನು ಕಾಣಬೇಕು. ಅವರ ಸಲಹೆಯಂತೆ ನಡೆದುಕೊಳ್ಳಬೇಕು.

ವೈದ್ಯ ವಿಜ್ಞಾನಕ್ಕೆ ಸಂಬಂಧಿಸಿದಂತೆ ಕನ್ನಡದಲ್ಲಿ ತಿಳಿಹೇಳುವ ಕೃತಿಗಳು ಅತಿಕಡಿಮೆ. ಆದರಲ್ಲೂ ಸಾಂಸರ್ಗಿಕ ರೋಗಗಳ ಬಗ್ಗೆ ಎಚ್ಚರ ನೀಡುವ ಕೃತಿ

ಗಳು ಬಹಳ ಕಡಿಮೆ. ಇದರಿಂದ ಜನತೆಗೆ ಮೂಲಭೂತವಾಗಿ ತಿಳಿದಿರಬೇಕಾದ ವಿಷಯಗಳ ಕೊರತೆ ಉಂಟಾಗುವುದು ಸ್ವಾಭಾವಿಕ. ಅಂಕಿ ಅಂಶಗಳು ತಿಳಿಸಿದ ಪ್ರಕಾರ,ಕಾಲರಾ ರೋಗಕ್ಕೆ ಸಿಕ್ಕ ಪ್ರತಿ ನೂರು ರೋಗಿಗಳಲ್ಲಿ 30–40 ರಷ್ಟು ಜನರು ಮರಣವನ್ನಪ್ಪುತ್ತಾರೆ. ಈ ರೋಗದ ಬಗ್ಗೆ ಸಾಕಷ್ಟು ಅರಿವಿಲ್ಲದವರಂತೂ ಇನ್ನೂ ಹೆಚ್ಚು ಪ್ರಮಾಣದಲ್ಲಿ ಸಾವು ಸಂಭವಿಸಬಹುದಾಗಿದೆ. ಹಿಂದೊಮ್ಮೆ ಬೃಹತ್ ಪ್ರಮಾಣದಲ್ಲಿ ಹರಡಿಕೊಂಡಿದ್ದ ಕಾಲರಾ, ಜನತೆಯ ತಿಳಿವಳಿಕೆಯ ಮಟ್ಟ ಹೆಚ್ಚಿದ್ದರಿಂದ ಆಧುನಿಕ ಉಪಚಾರಗಳ ಆಗಮನದಿಂದ ಈಗ ಅಷ್ಟಾಗಿಲ್ಲ ಆದರೆ ಸಂಪೂರ್ಣ ನಾಶವೂ ಆಗಿಲ್ಲ, ಆಗುವುದಿಲ್ಲ ಅಜ್ಞಾನ, ಸ್ವಚ್ಛತೆಯ ಅಭಾವ, ಕೊಳಚೆ ಪ್ರದೇಶಗಳ ಹೆಚ್ಚುವಿಕೆಗಳಿಂದ ಪುನಃ ಕಾಣಿಸಿಕೊಳ್ಳುವುದ ರಲ್ಲಿ ಸಂದೇಹವಿಲ್ಲ.

## ಸಾಂಸರ್ಗಿಕ ರೋಗ

ಮನುಷ್ಯರಿಂದ ಮನುಷ್ಯನಿಗೆ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಅಂದರೆ ಬೇರೆ ಪ್ರಾಣಿಗಳ ಮುಖಾಂತರ ಹರಡುವ ರೋಗಗಳಿಗೆ ಸಾಂಸರ್ಗಿಕ ರೋಗಗಳೆನ್ನುತ್ತಾರೆ. ಸ್ವಲ್ಪ ಕಾಲದಲ್ಲಿಯೇ ಒಂದೇ ಸ್ಥಳದ ಬಹಳ ಜನಗಳಿಗೆ ರೋಗ ಹಬ್ಬಿದಾಗ ಅದನ್ನು ಸಾಂಕ್ರಾಮಿಕವೆಂದು ಹೇಳುತ್ತಾರೆ.ಸಾಂಕ್ರಾಮಿಕ ವಾಗಿ ರೋಗವುಂಟಾದಾಗ ಸಾವಿನ ಪ್ರಮಾಣ ಸಾಮಾನ್ಯವಾಗಿ ಹೆಚ್ಚುತ್ತದೆ. ಕಾಲರಾ ರೋಗವು ಈ ಪ್ರಕಾರ ಹರಡುತ್ತದೆ. ಒಂದು ಸ್ಥಳದಲ್ಲಿ ಸಾಮಾನ್ಯ ವಾಗಿ ಇಲ್ಲದ ಕ್ರಿಮಿ ಯಾವುದೇ ಕಾರಣದಿಂದ ಅಲ್ಲಿಗೆ ಹಬ್ಬಿದಾಗ ಅದು ಸಾಂಕ್ರಾಮಿಕವನ್ನುಂಟು ಮಾಡುತ್ತದೆ.

## ಸಾಂಸರ್ಗಿಕ ರೋಗಗಳ ಹರಡುವಿಕೆ

ವಾತಾವರಣದಲ್ಲಿ ಎಲ್ಲೆಡೆಗಳಲ್ಲಿಯೂ ಕೋಟಿಕೋಟಿಗಟ್ಟಲೆ ಸೂಕ್ಷ್ಮ ಜೀವಾಣುಗಳು ವಾಸಿಸುತ್ತವೆ. ಬ್ಯಾಕ್ಟೀರಿಯಾಗಳು, ವೈರಸ್ಯಗಳು, ಕ್ರಿಮಿಗಳು ಹೀಗೆ ಅಸಂಖ್ಯಾತವಾಗಿ ಬೆಳೆದು ನಿಂತಿರುತ್ತವೆ. ಮಾನವ ಅನೇಕ ಪ್ರದೇಶಗಳಲ್ಲಿ ಹವಾಮಾನದ ವೈಪರೀತ್ಯಗಳಿಂದ ವಾಸಿಸಲಿಕ್ಕಿಲ್ಲ. ಆದರೆ ಈ ಸೂಕ್ಷ್ಮಜೀವಿಗಳು ಇಲ್ಲದ ಸ್ಥಳಗಳಿಲ್ಲ. ಕೆಲವೊಂದು ಸೂಕ್ಷ್ಮಾಣುಗಳು ಮಾನವನಿಗೆ ರೋಗಗಳನ್ನು ತರುವಂತವುಗಳಾಗಿರುತ್ತವೆ. ಮನುಷ್ಯ ಜೀವಿ ಈ ಜೀವಿಗಳ ಮಧ್ಯ ಸಹಜೀವನ ವನ್ನು ಮಾಡಬೇಕಾಗಿದೆ. ಮನುಷ್ಯ ಆರೋಗ್ಯ ನಿಯಮಗಳನ್ನು ಕೈ ಬಿಟ್ಟರೆ ಸಾಕು. ರೋಗಾಣುಗಳು ಮಾನವನನ್ನು ಮುತ್ತುತ್ತವೆ.ಸೆಣಸಾಟದಲ್ಲಿ ಮಾನವ ಸೋತದ್ದಾದರೆ ರೋಗ ಬರುವುದು ಖಂಡಿತವಾದ ಮಾತು.

## ಆಹಾರ ಮತ್ತು ನೀರಿನಿಂದ ಹರಡುವರೋಗ ಕಾಲರಾ

ಕಾಲರಾ ಪೀಡಿತ ವ್ಯಕ್ತಿಯ ಉಪಚಾರವನ್ನು ಮಾಡುವಾಗ ತುಂಬಾ ಎಚ್ಚರದಿಂದಿರಬೇಕು. ವ್ಯತ್ಯಾಸವಾದರೆ ರೋಗ ನೀರೋಗಿಗೂ ತಗಲುತ್ತದೆ. ಕಾಲರಾಕ್ಕೆ ಮತ್ತೊಂದು ಹೆಸರು ಮಾರಿಬೇನೆ, ಇದು ವಿಬ್ರಿಯೋ ಕಾಲರಾ ಮತ್ತು ವಿಬ್ರಿಯೋ ಎಲ್ಟಾರ್ ಎಂಬ ರೋಗ ಜಂತುಗಳಿಂದ ಈ ರೋಗ ಬರುತ್ತದೆ. ಆಹಾರ ನೀರು ರೋಗ ಜಂತುಗಳಿಂದ ದೂಷಿತಗೊಳ್ಳುತ್ತದೆ. ನೊಣಗಳು ಮತ್ತು ರೋಗಜಂತುಗಳನ್ನು ಮಲ, ವಾಂತಿಗಳಲ್ಲಿ ವಿಸರ್ಜಿಸುವವರು ರೋಗ ವನ್ನು ಹರಡಲು ಕಾರಣರಾಗಿರುತ್ತಾರೆ.

# ಪ್ರಾಚೀನ ರೋಗ ಕಾಲರಾ

ಕಾಲರಾ ರೋಗ ಇಂದು ನಿನ್ನೆಯದಲ್ಲ. ಅತ್ಯಂತ ಪುರಾತನವಾದ ರೋಗ ಭೂಮಿ ಹುಟ್ಟಿತು. ಭೂಮಿಯು ಹುಟ್ಟನೊಂದಿಗೆ ಸೂಕ್ಷ್ಮ ಜೀವಿಗಳೂ ಹುಟ್ಟಿದವು. ನಂತರ ಮಾನವ ಜನಿಸಿ ಬಂದ ಮಾನವನ ದಾರಿಯನ್ನೇ ಕಾಯುತ್ತಿರುವ ತೆ ಅವನಿಗಿಂತ ಮೊದಲೇ ಹುಟ್ಟಿ ನಿಂತಿವೆ. ಮಾನವನ ಹುಟ್ಟು ಬೆಳವಣಿಗೆಯ ಮೂಲಕ ಅಸ್ವಚ್ಛತೆ, ಕೊಳಚೆ, ಕಲುಷಿತ ಆಹಾರ, ನೀರು ಇವೆಲ್ಲವೂ ಆಗ ತೊಡಗಿದವು. ಮೇಲಾಗಿ ಅಜ್ಞಾನವೂ ಕವಿದಿತ್ತು. ವೈದ್ಯಕೀಯ ಸೌಲಭ್ಯಗಳ ಕೊರತೆಯೂ ಇತ್ತು. ಕ್ರಿ. ಪೂ. 7ನೇ ಶತಮಾನದಲ್ಲಿ "ಸುಶೃತ ಸಂಹಿತಾ" ಎಂಬ ಒಂದು ಆಯುರ್ವೇದ ಶಾಸ್ತ್ರದ ಗ್ರಂಥ ರಚನೆಯಾಗಿದೆ. ಅದರಲ್ಲಿ ಈ ಕಾಲರಾ ರೋಗವನ್ನು "ವಿಶೂಚಿಕಾ" ಎಂದು ಕರೆಯಲಾಗಿರುತ್ತದೆ. ಇದರಿಂದ ಕಾಲರಾ ರೋಗ ಇಂದು ನಿನ್ನೆಯದಲ್ಲ ಹಳೆಯ ರೋಗ ಎಂದು ಗೊತ್ತಾಗುತ್ತದೆ.

# ಕಾಲರಾದ ಇತಿಹಾಸ

ಹತ್ತೊಂಬತ್ತನೆಯ ಶತಮಾನದ ಪೂರ್ವ ಕಾಲಾವಧಿಯಲ್ಲಿ ಕಾಲರಾ ಪೂರ್ವದ ದೇಶಗಳಿಗೆ ಮಾತ್ರ ಸೀಮಿತವಾಗಿತ್ತು. ಆಗ ಭಾರತದಲ್ಲಿ ಈ ರೋಗದ ಹಾವಳಿ ಹೆಚ್ಚಾಗಿತ್ತು. ಆಗ ಜನರು ಈ ರೋಗಕ್ಕೆ ಜೀವ ಹಿಂಡುವ ನಾಯಕ ಎಂದು ಕರೆಯುತ್ತಿದ್ದರು.

ನಂತರ ಹತ್ತೊಂಬತ್ತನೆ ಶತಮಾನದ ಕೊನೆ ಭಾಗ ಹಾಗೂ ಇಪ್ಪತ್ತನೆಯ ಶತಮಾನದ ಮಧ್ಯದ ಕಾಲಾವಧಿ ಮತ್ತೊಂದು ಹಂತವಾಗಿರುತ್ತದೆ. ಈ ಅವಧಿಯಲ್ಲಿ ಕಾಲರಾ ಸಾಂಕ್ರಾಮಿಕ ರೂಪದಲ್ಲಿ ಕಾಣಿಸಿ ಕೊಂಡಿತ್ತು. ಆಗ

ಹಲವಾರು ಬಾರಿ ಕಾಲರಾ ಭಾರತೀಯರನ್ನು ಕೆಣಕಿತ್ತು. ಯುರೋಪದಲ್ಲಿ ಈ ರೋಗದ ಹಾವಳಿ ಮಾತ್ರ ಇರಲಿಲ್ಲಾ. ಪೂರ್ವದ ದೇಶಗಳಲ್ಲಿ ಮಾತ್ರ ಪದೆ ಪದೆ ಕಾಡುತ್ತಿತ್ತು. ಏಶಿಯಾದಲ್ಲಂತೂ ಇದರ ತೊಂದರೆ ಯಥಾ ಪ್ರಕಾರ ಮುಂದು ವರೆದಿತ್ತು. 1961 ರಲ್ಲಿ ಕಾಲರಾ ವಿಸ್ತರಿಸ ತೊಡಗಿತು. ಇಂಡೋನೇಶಿಯಾಕ್ಕೆ ಮಾತ್ರ ಸೀಮಿತಗೊಂಡಿದ್ದ ಕಾಲರಾ ಈಗ ಸೀಮೆ ದಾಟಿತು. ಹಾಂಗ್‌ಕಾಂಗ್ ಮತ್ತು ಫಿಲಿ ಫೈನ್ಸ್‌ಗಳಿಗೆ ರೋಗ ಹರಡಿತು. ನಂತರ ಉತ್ತರ ಮತ್ತು ಪಶ್ಚಿಮ ದತ್ತ ನಿರಂತರ ದಾಳಿ ಪ್ರಾರಂಭಿಸಿತು. 1964 ರಲ್ಲಿ ಭಾರತದಲ್ಲಿ ತನ್ನ ಪ್ರಭಾವ ವನ್ನು ತೋರ ಹತ್ತಿತ್ತು. ಅಲ್ಲಿಂದ ಪಶ್ಚಿಮ ದೇಶಗಳತ್ತ ಸಾಗಿತ್ತು.

ನಂತರ ಕಾಲರಾ ಪುನಃ ಏಶಿಯಾದ ಇಪ್ಪತ್ತು ದೇಶಗಳಲ್ಲಿ ಹರಡಿತ್ತು. ಆಫ್ರಿಕಾ, ದಕ್ಷಿಣ ಯುರೋಪಿನ ಬಹಳ ದೇಶಗಳಲ್ಲಿ ಕಾಲರಾ ಹಾವಳಿ ಹೆಚ್ಚಿತು. ತನ್ನ ರೌದ್ರ ರೂಪ ಜನತೆಗೆ ತೋರಿಸಿತು. 1980 ರಲ್ಲಿ ಸುಮಾರು ಒಂದುವರೆ ಲಕ್ಷ ಜನರಿಗೆ ಈ ರೋಗ ತಗುಲಿತು. 1990 ರಲ್ಲಿ ಅರ್ಧಲಕ್ಷ ಜನರನ್ನು ಕಾಡಿತು. ಜನರ ಜಾಗ್ರುತಿಯಿಂದಾಗಿ, ಮುಂಜಾಗರೂಕತಾ ಕ್ರಮಗಳಿಂದಾಗಿ, ಆಧುನಿಕ ಔಷದೋಪಚಾರಗಳಿಂದ ತಗುಲಿದ ರೋಗ, ಕಡಿಮೆ ಆಗುತ್ತಾ ಬಂದಿತು.

1964 ರಲ್ಲಿ ಕಾಲರಾ ತನ್ನ ಪ್ರಭಾವ ತೋರಿ ಭೌಗೋಲಿಕ ಹಂಚಿಕೆ ಯಲ್ಲಿ ಗಣನೀಯ ಬದಲಾವಣೆಯನ್ನು ತಂದಿತು. ರಾಜ್ಯಗಳು ಇದರ ಸೋಂಕಿಗೆ ತುತ್ತಾದವು. ಅಂಡಮಾನ್ ಮತ್ತು ನಿಕೋಬಾರ್ ನಡುಗಡ್ಡೆಗಳು ಮೊದಲ ಬಾರಿಗೆ ಈ ಅವಧಿಯಲ್ಲಿ ಸೋಂಕಿಗೆ ಸಿಕ್ಕವು. ರಾಜಸ್ಥಾನದ ಮರಭೂಮಿ ಯಲ್ಲೂ ಕಾಲರಾ ಕಾಲಿಟ್ಟಿತ್ತು. ಕರ್ನಾಟಕ, ಮಹಾರಾಷ್ಟ್ರ, ಆಂಧ್ರ, ಮದ್ರಾಸ, ಓರಿಸ್ಸಾ, ಬಿಹಾರ, ಪಶ್ಚಿಮ ಬಂಗಾಳ, ಉತ್ತರ ಪ್ರದೇಶ. ಆಸಾಮ ಮಧ್ಯ ಪ್ರದೇಶ, ಗುಜರಾತ, ಕೇರಳ ರಾಜ್ಯಗಳು ಕಾಲರಾ ಬಾಧಗೆ ತುತ್ತಾಗಿ ತತ್ತರಿಸಿವೆ. 1977 ರಲ್ಲಿ 55 ಸಾವಿರ ಜನರಿಗೆ ಕಾಲರಾ ಬಂದಿದ್ದು, 20 ಸಾವಿರ ಜನರು ಜೀವ ಕಳೆದುಕೊಂಡರು. 1990 ರಲ್ಲಿ ಹದಿಮೂರು

ಸಾವಿರ ಜನರಿಗೆ ಈ ರೋಗ ಬಂದು ಎರಡು ಸಾವಿರ ಜನರು ಮರಣ ವನ್ನಪ್ಪಿದರು.

## ಜೀವ ಹಿಂಡುವ ಕಾಯಿಲೆ ಕಾಲರಾ

ಕಾಲರಾ ಒಂದು ಸಾಂಕ್ರಾಮಿಕ ರೋಗವಾಗಿರುತ್ತದೆ. ವಾಂತಿ ಹಾಗೂ ನೋವಿಲ್ಲದ ಭೇದಿ ಈ ರೋಗದ ಪ್ರಮುಖ ಲಕ್ಷಣವಾಗಿರುತ್ತದೆ. ವಾಂತಿ, ಭೇದಿ ಎರಡೂ ರೋಗಿಗೆ ಪ್ರಾರಂಭವಾದರೆ, ಅವನ ದೇಹದಲ್ಲಿರುವ ನೀರು ಹೊರ ಹೋಗುತ್ತದೆ. ಲವಣಾಂಶಗಳ ಕೊರತೆ ಉಂಟಾಗುತ್ತದೆ. ಕೈ ಕಾಲು ಗಳು ಜೋಮು ಹಿಡಿಯುತ್ತವೆ. ಮೂತ್ರ ವಿಸರ್ಜನೆ ಕಡಿಮೆ ಪ್ರಮಾಣದಲ್ಲಿ ನಡೆಯುತ್ತದೆ. ರೋಗಿ ಸುಸ್ತಾಗುತ್ತಾನೆ. ಮಂಕಾಗುತ್ತಾನೆ.

## ಕಾಲರಾಕ್ಕೆ ಕಾರಣವಾದ ರೋಗಾಣು

ಈ ರೋಗಕ್ಕೆ ಕಾರಣವಾದ ರೋಗಾಣುವಿನ ಹೆಸರು ವಿಬ್ರಿಯೋ ಕಾಲರಾ, ಎಂಬ ಸೂಕ್ಷ್ಮಾಣು ಜೀವಿಯಾಗಿದೆ. ಅದರಂತೆ ವಿಬ್ರಿಯೋ ಎಲ್ಟಾರ್ ಎಂಬ ರೋಗಜಂತುವೂ ಕಾಲರಾ ರೋಗಕ್ಕೆ ಕಾರಣವಾಗಿರುತ್ತದೆ. ಈ ರೋಗಾಣುವಿನ ಆಕಾರ ಅಲ್ಪ ವಿರಾಮದ ಆಕಾರ, ಇದರ ಬೆಳವಣಿಗೆಗೆ ಆಮ್ಲ ಜನಕ ಬೇಕು. ಚಲಿಸಲು ಕಶಾಂಗಗಳಿರುತ್ತವೆ.

# ಕಾಲರಾ ರೋಗದ ಲಕ್ಷಣಗಳು

ಅಕ್ಕಿ ತೊಳೆದ ಗಂಜಿಯಂತೆ ಭೇದಿಯಾಗುತ್ತದೆ. ನೀರು ನೀರಾಗಿರುವಂತೆ ವಾಂತಿಯಾಗುತ್ತದೆ. ರೋಗಿ ತನ್ನ ದೇಹದಿಂದ ನೀರು, ಲವಣಗಳನ್ನು ಕಳೆದು ಕೊಂಡು ಅಶಕ್ತನಾಗುತ್ತಾನೆ. ರೋಗಿಗೆ ನೀರಡಕೆಯಾಗುತ್ತನೆ. ಕಣ್ಣುಗಳು. ಕೆನ್ನೆಗಳು ಗುಳಿ ಬೀಳುತ್ತವೆ. ದೇಹದ ಚರ್ಮ ಒಣಗಿ ಒರಟಾಗುತ್ತದೆ. ಸ್ನಾಯುಗಳಲ್ಲಿ ಸೆಳೆತ ಉಂಟಾಗುತ್ತದೆ. ಮಾತನಾಡಲು ಸಾಧ್ಯವಾಗುವುದಿಲ್ಲ, ಮೂತ್ರ ವಿಸರ್ಜನೆ ಕಡಿಮೆಯಾಗುತ್ತದೆ. ಎಚ್ಚರ ತಪ್ಪಲು ಸಾಧ್ಯತೆಗಳು ಕಂಡು ಬರುತ್ತದೆ.

ಕಾಲರಾ ರೋಗಾಣುಗಳು ದೇಹದೊಳಕ್ಕ 1-2 ದಿವಸಗಳಲ್ಲಿಯೇ ರೋಗವು ಏಕಾಏಕಿಯಾಗಿ ಭೇದಿಯಿಂದ ಪ್ರಾರಂಭವಾಗುತ್ತದೆ ಸಣ್ಣಕರುಳಿನಲ್ಲಿ ಹುದುಗಿ ಕುಳಿತು, ಬೆಳೆದು ವಂಶಾಭಿವೃದ್ಧಿ ಮಾಡುವ ಈ ರೋಗಾಣು ಹೊರ ಹಾಕುವ ವಿಷ ವಸ್ತು ಅಲ್ಲಿನ ಲೋಳ್ಪರೆಯ ಮೇಲೆ ಪ್ರಭಾವ ಬೀರಿ ಉರಿತ ವನ್ನು ಉಂಟುಮಾಡಿ, ಅಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಲವಣಗಳನ್ನೊಳಗೊಂಡ ದ್ರವ ಹೊರಕ್ಕೆ ಹರಿದು ಬರುವುದಕ್ಕೆ ಕಾರಣವಾಗುತ್ತದೆ. ವ್ಯಕ್ತಿ ಪದೇ ಪದೇ ವಿಫಲ ಪ್ರಮಾಣದಲ್ಲಿ ಮಲವಿಸರ್ಜನೆಯನ್ನು ಮಾಡತೊಡಗುತ್ತಾನೆ. ನೋವು ಆದರೊಟ್ಟಿಗೆ ಕಾಣಿಸುವುದಿಲ್ಲ. ಸ್ವಲ್ಪ ಸಮಯದಲ್ಲಿಯೇ ಮಲ ತನ್ನ ಮಲದ ಲಕ್ಷಣಕಳೆದುಕೊಂಡು ಅಕ್ಕಿ ತೊಳೆದ ನೀರಿನಂತಿರುತ್ತದೆ. ಜೊತೆಗೆ ರೋಗಿಯೂ ಅಂತಹದೇ ದ್ರವವನ್ನು ಯಾವ ಕಷ್ಟವೂ ಇಲ್ಲದೆ ವಾಂತಿ ಮಾಡಲಾರಂಭಿಸು ತ್ತಾನೆ. ಮನುಷ್ಯ ನಿಸ್ತೇಜಗೊಳ್ಳುತ್ತಾನೆ. ಉದರದಲ್ಲಿನ ಸ್ನಾಯು ಸೆಳೆತದ ಲಕ್ಷಣ ಕಂಡುಬರುತ್ತದೆ. ಮುಖ ಕಳೆಗುಂದುತ್ತದೆ ಕಣ್ಣು ಒಳಸೇರುತ್ತವೆ. ನಾಲಿಗೆ ಒಣಗುತ್ತದೆ. ಚರ್ಮ ಸುಕ್ಕುಗಟ್ಟುತ್ತದೆ. ಬೆರಳುಗಳು ಮುದುಡಿಕೊಳ್ಳು ತ್ತವೆ. ರಕ್ತದೊತ್ತಡ ಕೆಳಗಿಳಿಯುತ್ತದೆ. ಕಾಲರಾರೋಗವನ್ನು ಮಲಪರೀಕ್ಷೆಯು ಖಚಿತಪಡಿಸುವುದು.

## ಉಪಚಾರ

ಕಾಲರಾ ಪೀಡಿತ ರೋಗಿ ಅತ್ಯಂತ ಸೂಕ್ಷ್ಮವಾಗಿರುತ್ತಾನೆ. ಸೂಕ್ಷ್ಮ ವಾಗಿ ಅವನನ್ನು ಉಪಚರಿಸಬೇಕಾಗುತ್ತದೆ. ಕಾಲರಾ ರೋಗಿಯನ್ನು ಪ್ರತ್ಯೇಕ ವಾದ ಸ್ಥಳದಲ್ಲಿ ಇಡಬೇಕು.ಮನೆಯಲ್ಲಿ ಸರಿಯಾಗಿ ಉಪಚಾರ ವಿಧಾನ ಅರಿಯ ದಿದ್ದರೆ ರೋಗಿಯನ್ನು ಆಸ್ಪತ್ರೆಗೆ ಸೇರಿಸಬೇಕು· ರೋಗಿ ತನ್ನ ದೇಹದಿಂದ ನೀರನ್ನು, ಲವಣಗಳನ್ನು ಕಳೆದುಕೊಳ್ಳುತ್ತಿರುವುದರಿಂದ ಅವನಿಗೆ ಜೀವನ ಜಲವನ್ನು ಕೊಡುತ್ತಿರಬೇಕು. ಅಕ್ಕಿಯ ಗಂಜಿ. ರಾಗಿಗಂಜಿ, ನಿಂಬೆ ಹಣ್ಣಿನ ಪಾನಕ, ಬೇಳೆ ಕಟ್ಟು, ಹಣ್ಣಿನ ರಸ, ಮಜ್ಜಿಗೆ ಮುಂತಾದ ದ್ರವರೂಪದ ಪದಾರ್ಥಗಳನ್ನು ರೋಗಿಗೆ ಕೊಡಬಹುದು.

ರೋಗಿಗೆ ಸ್ವಚ್ಛತೆಯ ಅವಶ್ಯಕತೆ ತೀರಾ ಅವಶ್ಯಕವಾಗಿರುತ್ತದೆ. ರೋಗಿ ಯನ್ನು ಇತರರಿಂದ ಬೇರ್ಪಡಿಸಿ ಚಿಕಿತ್ಸೆ ಮಾಡುವುದು ಉಚಿತವೆನಿಸುತ್ತದೆ. ವಿಸರ್ಜನೆ ಮಲ ಹಾಗೂ ವಾಂತಿಯನ್ನು ನಂಜು ಕಳೆದ ವಸ್ತುಗಳೊಂದಿಗೆ ಸೇರಿಯೇ ನಾಶಗೊಳಿಸಬೇಕು. ವಾಂತಿಯ ನಂತರ ನೀರು, ಚಹಾ, ಎಳನೀರು, ಗ್ಲುಕೋಜ ಮಿಶ್ರಿತ ಲವಣ ಜಲವನ್ನು ಪದೆ ಪದೆ ಕೊಡುತ್ತಿರಬೇಕು.

ಶುದ್ಧವಾದ ನೀರು, ಶುಚಿಯಾದ ಆಹಾರ ಮತ್ತು ನೈರ್ಮಲ್ಯ ವಾತಾ ವರಣ ಈ ರೋಗವನ್ನು ನಿಧಾನಿಸುತ್ತದೆ. ನೀರನ್ನು ರೋಗಿಗೆ ಕಾಯಿಸಿಕೊಡ ಬೇಕು ಬಿಸಿಯಾದ ಚೊಕ್ಕಟ ಆಹಾರವನ್ನು ಕೊಡಬೇಕು.

## ಔಷದೋಪಚಾರಗಳು

ಟೆಟ್ರಾ ಸೈಕ್ಲಿನ್, ಕ್ಲೋರಾಂಫೆನಿಕಲ್ ಜೀವನಿರೋಧಕಗಳ ಕೊಡುಗೆ ಯಿಂದ, ರೋಗಕಾರಕ ಜೀವಾಣುಗಳನ್ನು ಹೋಗಲಾಡಿಸಬೇಕು. ಕಾಲರಾ

ಸೋಂಕಿನ ವಿರುಧ್ಧ ಪರಿಣಾಮಕಾರಿಯಾದ ವ್ಯಾಕ್ಸಿನ್ ಇದ್ದು, ಅದನ್ನು ಎರಡುಬಾರಿ ಎಂಭತ್ತು ದಿನಗಳ ಅಂತರದಲ್ಲಿ ತಗೆದುಕೊಳ್ಳಬೇಕು. ಇದು ಆರು ತಿಂಗಳ ಕಾಲ ರಕ್ಷಣೆಯನ್ನೊದಗಿಸುತ್ತದೆ. ರೋಗಿ ಮೂತ್ರ ವಿಸರ್ಜಿಸಲು ಪ್ರಾರಂಭಿಸಿದ ನಂತರ ಪೊಟ್ಯಾಸಿಯಂ ಕೊಡಬೇಕು. ರೋಗಿಯ ಚಿಕಿತ್ಸೆಗೆ ಸಂಬಂಧಪಟ್ಟ, ಸೂಕ್ತ ಜೀವ ರೋಧಕಗಳನ್ನು ಉಪಯೋಗಿಸಬೇಕು.

## ಜೀವನ ಜಲ

ಕಾಲರಾ ರೋಗಿಯ ದೇಹದಲ್ಲಿ ನೀರು ಹಾಗೂ ಲವಣಗಳು ಹೊರ ಹೋಗುವುದರಿಂದ ಉಂಟಾಗುವುದರ ತೊಂದರೆಗಳನ್ನು ನಿವಾರಿಸಿ ಜೀವನವನ್ನು ಕಾಪಾಡುವ ಸಿದ್ಧಪಡಿಸಿದ ಜಲವೇ ಜೀವನ ಜಲವಾಗಿರುತ್ತದೆ.

ತಿನ್ನುವ ಉಪ್ಪು 3.5 ಗ್ರಾಂ. ಪೊಟ್ಯಾಸಿಯಂ ಕ್ಲೋರೈಡ್ 1.5 ಗ್ರಾಂ ಹಾಗೂ ಗ್ಲುಕೋಸ್ 20 ಗ್ರಾಂ. ಇವೆಲ್ಲವನ್ನು ಕಾಯಿಸಿ ಆರಿಸಬೇಕು. ಸೋಸಿದ ಒಂದು ಲೀಟರ್ ನೀರಿನಲ್ಲಿ ಇವನ್ನು ಕರಗಿಸಬೇಕು.

ಮನೆಯಲ್ಲಿ ಅಡಿಗೆಯು ಉಪ್ಪು ಮುಕ್ಕಾಲು ಚಮಚೆಯಷ್ಟು, ಅಡುಗೆಯ ಸೋಡಾ ಅರ್ಧಚಮಚ ಸಕ್ಕರೆ 4–6 ಚಮಚೆಯಷ್ಟನ್ನು ತೆಗೆದುಕೊಂಡು ಇವುಗಳನ್ನು ಒಂದು ತಂಬಿಗೆಯಷ್ಟು ಪ್ರಮಾಣದ ಕಾರ, ಆರಿಸಿ, ಸೋಸಿ, ನೀರಿನಲ್ಲಿ ಕರಗಿಸಬೇಕು ಇದಕ್ಕೆ ಅರ್ಧ ನಿಂಬೆಹಣ್ಣಿನ ರಸವನ್ನು ಕೂಡಿಸ ಬೇಕು ಈ ರೀತಿ ತಯಾರಿಸಿದ ಜೀವನ ಜಲವನ್ನು 24 ಗಂಟೆಗಳಲ್ಲಿಯೇ ಉಪಯೋಗಿಸಬೇಕು. ಈ ರೀತಿ ಸಿದ್ಧ ಪಡಿಸಿದ ದ್ರಾವಣವನ್ನು ಪುನಃ ಕಾಯಿಸಬಾರದು.

# ಕಾಲರಾ ತಡೆಯಲು ಮುನ್ನೆಚ್ಚರಿಕೆಯ ಕ್ರಮಗಳು

ಕಾಲರಾ ಒಂದು ಸಾಂಕ್ರಾಮಿಕ ರೋಗ. ಭಯಂಕರ ರೋಗ, ಮಾರಕ ರೋಗ ಕೊಳಚೆ, ನಿರ್ಲಕ್ಷದಿಂದಾಗಿ ಒಂದೆಡೆ ಹರಡಿತೆಂದರೆ ಎಲ್ಲೆಡೆ ಪಸರಿಸುವ ಸಾಧ್ಯತೆಗಳಿರುತ್ತವೆ. ನಾವು ನಮ್ಮ ಆರೋಗ್ಯವನ್ನು ಕಾಪಾಡುವುದಕ್ಕೋಸ್ಕರ ಸಾಧ್ಯವಾದಷ್ಟು ಕಾಲರಾವನ್ನು ಬರದಂತೆಯೇ ನೋಡಿಕೊಳ್ಳಬೇಕು.

1) ಪರಿಶುದ್ಧವಾದ ನೀರನ್ನೇ ಕುಡಿಯಲು ಉಪಯೋಗಿಸಬೇಕು.

2) ಆಹಾರ ಪದಾರ್ಥಗಳನ್ನು ಚನ್ನಾಗಿ ತೊಳೆದೊರಿಸಿದ ಪಾತ್ರೆಗಳಲ್ಲಿ ಮುಚ್ಚಿ ಇಡಬೇಕು.

3) ಕುಡಿಯಲು ಕೊಳವೆ ಭಾವಿ ನೀರು ಉತ್ತಮವಾದದ್ದು.

4) ನೀರನ್ನು ಚನ್ನಾಗಿ ಕುದಿಸಿ, ಆರಿಸಿ, ನಂತರ ಕುಡಿಯಿರಿ.

5) ಮನೆಯಲ್ಲಿ ಮನೆ ಸುತ್ತ ಮುತ್ತ ನೊಣಗಳಾಗದಂತೆ ನೋಡಿಕೊಳ್ಳಿ.

6) ಧೂಳದಲ್ಲಿ, ರಸ್ತೆ ಬದಿಯಲ್ಲಿ, ತೆರೆದ ಆಹಾರ, ಪಾನೀಯ, ಮಿಠಾಯಿ, ತಿಂಡಿ ತಿನಸುಗಳನ್ನು ಎಂದೂ ತಿನ್ನಬೇಡಿ.

7) ಕರಿದ ಪದಾರ್ಥ ರಸ್ತೆ ಅಂಗಡಿಗಳಿಂದ ತಂದು ತಿನ್ನ ಬೇಡಿ.

8) ಕೊಳೆತ ಹಣ್ಣುಗಳನ್ನು ತಿನ್ನಲೇ ಬಾರದು.

9) ಐಸ್ಕ್ರೀಮು ದೇಹದ ಆರೋಗ್ಯಕ್ಕೆ ಒಳ್ಳೇಯದಲ್ಲ.

10) ಮನೆ, ಒಳ ಹೊರಗೆ ಶುಚಿತ್ವವನ್ನು ಕಾಪಾಡಿಕೊಳ್ಳಬೇಕು.

11) ಎಲ್ಲೂ ನೀರು ಮಲಿತು ನಿಲ್ಲುವಂತೆ ಮಾಡಬಾರದು.

12) ಕಕ್ಕಸನ್ನು ಶುಚಿಯಾಗಿಡಬೇಕು.

13) ತರಕಾರಿ, ಹಣ್ಣುಗಳನ್ನು ಚನ್ನಾಗಿ ತೊಳೆದು ಉಪಯೋಗಿಸಬೇಕು.

14) ತಂಗಳ ಆಹಾರವನ್ನು ತಿನ್ನಬಾರದು.

15) ಸಿಕ್ಕ ಸಿಕ್ಕ ಕಡೆಗಳಲ್ಲಿ ಮಲ ಮೂತ್ರ ವಾಂತಿ ಮಾಡಬಾರದು.

16) ಕ್ಲೋರಿನೇಷನ್ ಆದ ನೀರು ಕುಡಿಯಲು ಉತ್ತಮ.

17) ಸಂತೆ, ಜಾತ್ರೆ, ಉತ್ಸವಗಳನ್ನು ನಿಯಂತ್ರಿಸಬೇಕು.

18) ಆಹಾರ ಸೇವಿಸುವ ಮೊದಲು ಕೈ, ಕಾಲುಗಳನ್ನು ಸೋಪಿನಿಂದ ಚನ್ನಾಗಿ ತೊಳೆದುಕೊಳ್ಳಬೇಕು.

19) ಪರಿಸರವನ್ನು ಗಲೀಜು ಮಾಡಬಾರದು.

20) ಲಸಿಕೆಗಳಿಗಿಂತಲೂ ಉತ್ತಮವಾಗಿರುವ ಇನ್ನಿತರ ವಿಧಾನ ಗಳನ್ನು ಉಪಯೋಗಿಸಬೇಕು.

21) ಉಗುರುಗಳನ್ನು ಬೆಳೆಸಬಾರದು.

22) ವಾಂತಿ, ಭೇದಿಗಳನ್ನು, ಸುಡಬೇಕು. ಅಥವಾ ಮಣ್ಣಲ್ಲಿ ಮುಚ್ಚಬೇಕು.

23) ಸೇವೆ ಮಾಡುವವರಿಗೆ ಸೋಂಕು ತಗುಲದಂತೆ ನೋಡಿಕೊಳ್ಳ ಬೇಕು.

24) ಹಾಲನ್ನು ಚನ್ನಾಗಿ ಕುದಿಸಿ ಕುಡಿಯಬೇಕು.

25) ಯಾವಾಗಲೂ ತಾಜಾ ಆಹಾರದ ಸೇವನೆ ಆಗಬೇಕು.

26) ರೋಗಕ್ಕೆ ತಕ್ಕಂತೆ ಚಿಕಿತ್ಸೆ ಪಡೆಯಬೇಕು.

27) ಇದೇ ರೋಗವೆಂದು ನೀವೇ ನಿರ್ಧರಿಸಿ, ನೀವೇ ಔಷಧಿಗಳನ್ನು ನಿರ್ಧರಿಸಿ ತೆಗೆದುಕೊಳ್ಳಬಾರದು.

28) ಪುನರ್ಜಲೀಕರಣ ದ್ರಾವಣವನ್ನು ರೋಗಿಗೆ ಕೊಡಬೇಕು.

29) ನೀರು, ಎಳೆ ನೀರು, ಗ್ಲುಕೋಜ ನೀರು, ಲವಣ ಜಲ ಪದೆ ಪದೆ ಕುಡಿಯಲು ಪ್ರೋತ್ಸಾಹಿಸಬೇಕು.

30) ರೋಗಿಗೆ ಗಾಳಿ, ಬೆಳಕುಗಳಿಂದ ಕೂಡಿದ ಸ್ವಚ್ಛವಾದ ಕೋಣೆ ಯಲ್ಲಿಟ್ಟು ಉಪಚರಿಸಬೇಕು.

31) ಕೊಠಡಿಗಳಲ್ಲಿ ಗುಂಗಾಡು, ಚಿಕ್ಕಾಡು, ತಗಣಿಗಳಿರದಂತೆ ಆಗಾಗ ಕ್ರಿಮಿನಾಶಕಗಳನ್ನು ಸಿಂಪಡಿಸುತ್ತಿರಬೇಕು.

32) ಮಕ್ಕಳಿಗೆ ಸಕಾಲದಲ್ಲಿ ರೋಗ ನಿರೋಧಕ ಚುಚ್ಚುಮದ್ದನ್ನು ಹಾಕಬೇಕು.

33) ರೋಗದ ಸರಿಯಾದ ಮಾಹಿತಿಯನ್ನು ಕೂಡಲೇ ಸಂಬಂಧ ಪಟ್ಟ ಅಧಿಕಾರಿಗಳಿಗೆ ಕೊಡಬೇಕು.

34) ರೋಗಿಯೂ ಕಾಲರಾದಿಂದ ಚಿಕಿತ್ಸೆಯಾಗದ ಹೊರತು ಅವನನ್ನು ಸಾರ್ವಜನಿಕ ಸ್ಥಳಗಳಲ್ಲಿ ಬಿಡಬಾರದು.

35) ಯಾವುದೇ ಸಾಂಕ್ರಾಮಿಕ ಸೋಂಕು ತಗುಲಿದಾಗ ತಕ್ಕ ಚಿಕಿತ್ಸೆಗಾಗಿ ತಜ್ಞ ವೈದ್ಯರ ಸಲಹೆಗಳನ್ನು ತಕ್ಷಣ ಪಡೆಯಬೇಕು.

ಈ ಮೇಲಿನ ಮುನ್ನೆಚ್ಚರಿಕೆಯ ಕ್ರಮಗಳನ್ನು ಪ್ರತಿಯೊಬ್ಬರು ತಪ್ಪದೆ ಪಾಲಿಸಿ ಕಾಲರಾ ಭೀತಿಯಿಂದ ಪಾರಾಗಿ. ಉತ್ತಮ ಆರೋಗ್ಯದಲ್ಲಿ ಹೆಚ್ಚಿನ ಆನಂದವಿರುತ್ತದೆ. ಅನಂದ ಅನುಭವಿಸುವುದನ್ನು ಬಿಟ್ಟು ರೋಗವನ್ನು ಸ್ವಾಗತಿಸುವ ಕೃತ್ಯಗಳಿಗೆ ನಾವೂ ಎಂದಿಗೂ ಕೈ ಹಾಕಬಾರದು.

## ಬೈಬಲ್‌ದೊಂದು ಸ್ತೋತ್ರ ಗೀತೆ

"ನೀಹದಿಂದೆಲ್ಲ ನೀರಿನಂತೆ ಹೊರ ಹೋಗಿದೆ, ನನ್ನೆಲ್ಲಾ ಮೂಳೆಗಳು ಕೀಲು ತಪ್ಪಿವೆ, ನನ್ನ ಹೃದಯ ಮೇಣದಂತೆ ಕರಗಿದೆ ಭೇದಿಯ ಮಧ್ಯ.

## ಒಂದು ಪ್ರಯೋಗದ ಫಲಿತಾಂಶ

ಕಾಲರಾ, ಅತಿಸಾರ,ಉಚ್ಚಾಟಗಳಲ್ಲಿ ಈಗ ಬಳಕೆಯಲ್ಲಿರುವಂತೆ ಇನ್ನೂ ಮೇಲೆ ರಕ್ತನಾಳಾಂತರವಾಗಿ ಸೀಸಗಟ್ಟಳೆ ಉಪ್ಪು ನೀರನ್ನು ಚುಚ್ಚುಮದ್ದಾಗಿ ಕೊಡಬೇಕಾಗಿರುವುದಿಲ್ಲ. ಈ ರೀತಿ ನಿರ್ಧಾರವಾಗಿದೆ. ಕಲ್ಪತ್ತಾದ

ಅಂಟುರೋಗದ ಆಸ್ಪತ್ರೆಯಲ್ಲಿ ನಡೆಸಿದ ಪ್ರಯೋಗದಲ್ಲಿ ನೂರಕ್ಕೆ 95 ಮಂದಿಗೆ ಲವಣಮಿಶ್ರಿತ ನೀರನ್ನು ಕುಡಿಸಿದ್ದರಿಂದ ಗುಣವಾಗಿದೆ. ಇದರಿಂದ ವರ್ಷಕ್ಕೆ 4 ಲಕ್ಷ ರೂಪಾಯಿಗಳ ಉಳಿತಾಯವಾಗಿದೆ. ಈ ವಿಧಾನ ಸರಳ, ಸುಲಭ, ಪರಿಣಾಮಕಾರಿಯಾಗಿದ್ದರೂ ಹೆಚ್ಚಿನ ಖರ್ಚಿನದಲ್ಲ. ಮನೆಮನೆಗಳಲ್ಲೇ ರೋಗಿಗಳಿಗೆ ಕೂಡಲೇ ಕೊಡುವಂತೆ ಕಾಗದದ ಪೊಟ್ಟಣಗಳಲ್ಲಿ ಲವಣ ಮಿಶ್ರಣವನ್ನು ನೀರಿಗೆ ಸೇರಿಸಿ ಕುಡಿಸಲು ಕೊಡುವರು ವಿಶ್ವ ಆರೋಗ್ಯ ಸಂಸ್ಥೆಯ ಸೂಚನೆಯಂತೆ ಪೊಟ್ಟಣದಲ್ಲಿ ಅಡಿಗೆಉಪ್ಪು 3.5 ಗ್ರಾಂ ಅಡಿಗೆಸೋಡಾ, 2.5 ಗ್ರಾಂ ಮತ್ತು ಪೊಟ್ಯಾಸಿಯಂ ಕ್ಲೋರೈಡು, 1.5 ಗ್ರಾಂ ಗ್ಲುಕೋಜ 20 ಗ್ರಾಂ ಇರುತ್ತವೆ. ಇಷ್ಟನ್ನೂ ಒಂದುಲೀಟರ ನೀರಿನಲ್ಲಿ ಕರಗಿಸಿ ಕುಡಿಸಬೇಕು.ಎಳೆಯ ಮಕ್ಕಳು ವಯಸ್ಸಾದವರಲ್ಲಂತೂ ಬಹಳ ಉಚ್ಚಾಟದಿಂದ ಸುಸ್ತಾಗಿ ಸಾಯುವದನ್ನೇ ಇದರಿಂದ ತಪ್ಪಿಸಬಹುದು. ಈ ದ್ರಾವಣವನ್ನು ಸಣ್ಣ ಪ್ರಮಾಣಗಳಲ್ಲಿ ಬಿಟ್ಟು ಬಿಟ್ಟು ಕುಡಿಸಿದರೆ ಎಲ್ಲವೂ ದಕ್ಕುತ್ತದೆ.

## ಬ್ಯಾಕ್ಟೀರಿಯಾಗಳ ಜನಕ ರಾಬರ್ಟ್‌ಕಾಕ್

19 ನೇ ಶತಮಾನದ ವಿಜ್ಞಾನಿ, ಪ್ರಸಿದ್ಧ ವೈದ್ಯ ವಿಜ್ಞಾನಿ, ಕ್ಷಯ, ಕಾಲರಾ ಮುಂತಾದ ರೋಗಗಳು ಯಾವ ಯಾವ ವಿಷ ಕ್ರಿಮಿಗಳಿಂದ ಬರುತ್ತವೆ ಅವುಗಳ ಆಕಾರ, ಗಾತ್ರ, ಚಟುವಟಿಕೆ, ಮಾಡುವ ಕ್ರಿಯೆ ಮುಂತಾದವುಗಳ ಬಗ್ಗೆ ಇವರೇ ಪತ್ತೆ ಮಾಡಿದರು.ಅವರು ಇನ್ನೂ ಹೆಚ್ಚಿನ ರೋಗಗಳಿಗೆ ಕಾರಣವಾದ ಬ್ಯಾಕ್ಟಿರಿಯಾಗಳ ಬಗ್ಗೆ ಆ ರೋಗದ ವಿಚಾರವಾಗಿ ಮಾಹಿತಿಯನ್ನು ಕೊಟ್ಟಿದ್ದಾರೆ.

ಹೀಗಾಗಿ ಪ್ರಪಂಚದ ವೈದ್ಯಕೀಯ ಸಮಾಜದವರು ಈಗಲೂ ಕಾಕ್‌ರನ್ನು ಬ್ಯಾಕ್ಟೀರಿಯಾಗಳ ಜನಕ ಎಂದು ಕರೆದಿದ್ದಾರೆ.

## ರೋಗಿ ಹಾಗೂ ವೈದ್ಯವಿಜ್ಞಾನಿ

1883 ರಲ್ಲಿ ಈಜಿಪ್ತದಲ್ಲಿ ನಡೆಯಿಸಿದ ಪ್ರಯೋಗವಿದು, ಒಬ್ಬರೋಗಿ ನಿರಂತರ ವಾಂತಿ ಭೇದಿಯಿಂದ ನರಳುತ್ತಿದ್ದ. ಬ್ಯಾಕ್ಟೀರಿಯಾ ತಜ್ಞರಾದ ವೈದ್ಯ ಶಾಸ್ತ್ರದ ಹಿರಿಯ ವಿಜ್ಞಾನಿ ರಾಬರ್ಟಕಾರ್ಕ್‌ರವರು ಈ ರೋಗಿಯನ್ನು ವಿವರ ವಾಗಿ ಪರೀಕ್ಷೆಗೊಳಪಡಿಸಿದರು, ಆ ವ್ಯಕ್ತಿ ಕಾಲರಾ ಪೀಡಿತ ರೋಗಿ ಎಂದು ಗೊತ್ತಾಯಿತು. ಆಗ ಕಾರ್ಕ್‌ರವರು ಈ ರೋಗ "ವಿಬ್ರಿಯೋ ಕಾಲರೆ" ಎಂಬ ಬ್ಯಾಕ್ಟೀರಿಯಾದಿಂದ ಬರುತ್ತದೆ ಎಂಬುದನ್ನು ಸಂಶೋಧನೆ ಮಾಡಿ ಖಚಿತ ಪಡಿಸಿದರು, ಆಗಿನಿಂದ ಅವರು ಕಾಲರಾ ರೋಗ ವಿಬ್ರಿಯೋ ಕಾಲರೆ ಎಂಬ ಜೀವಾಣುವಿನಿಂದಲೇ ಬರುತ್ತದೆ ಎಂದು ಕಂಡು ಹಿಡಿದ ವಿಜ್ಞಾನಿ ಎನಿಸಿದರು.

## ನಂಬಿಕೆ– ಅಂದು, ಇಂದು

ಹಳೆಯಕಾಲ ಪ್ರಪಂಚ ಮುಂದುವರೆದಿದ್ದಿಲ್ಲ. ಹೆಚ್ಚಿನ ಜ್ಞಾನ ಸಂಪಾ ದನೆ ಇರಲಿಲ್ಲಾ. ಏನೇರೋಗ ಬಂದರೂ, ಏನೇ ಕಷ್ಟಬಂದರೂ ದೇವರನ್ನೋ. ದೈವವನ್ನೋ, ದೆವ್ವವನ್ನೋ ಮರೆಹೋಗುತ್ತಿದ್ದರು. ಇವರೆ ನಮ್ಮನ್ನು ಕಾಪಾ ಡುವರೆಂಬ ಬಲವಾಗಿ ನಂಬಿದ್ದರು, ಕಾಲರಾ ಪ್ಲೇಗ ಬಂದಿತೆಂದರೆ ಔಷಧೋಪ ಚಾರಗಳಿಂದ ಗುಣಪಡಿಸಬೇಕೆಂಬ ವಿಚಾರ ಅವರಿಗೆ ಗೊತ್ತಿರಲಿಲ್ಲಾ. ಆಕಾಶದ ಕಡೆ ಕೈ ಎತ್ತಿ ಬೇಡುತ್ತಿದ್ದರು, ಮಾರೆಮ್ಮನ ಕಾಟವಿದು ಎಂದು ಗೊಣಗುತ್ತಿ ದ್ದರು. ಗ್ರಾಮದೇವತೆಗೆ ಪೂಜೆ, ಪುನಸ್ಕಾರಗಳು, ಹರಕೆ, ಬಲಿ, ದಂಡಗಳು ಪ್ರಾರಂಭವಾಗುತ್ತಿದ್ದವು. [illegible] ದೇವತೆಗಳು ಕೋಪಿಸಿಕೊಂಡಿದ್ದಾ ರೆಂದು ಪೇಚಾಡುತ್ತಿದ್ದರು ಈ ನಂಬಿಕೆಯಿಂದಲೇ ರೋಗಿಯ ಕಡೆ ಲಕ್ಷ್ಯಕೊಡು ವುದಾಗುತ್ತಿದ್ದಿಲ್ಲ. ಸ್ವಚ್ಛತೆ ಮೊದಲೇ ಇದ್ದಿಲ್ಲ. ತಮಗೆ ತಿಳಿದಂತೆ ರೋಗಿ ಯನ್ನು ನೋಡುತ್ತಿದ್ದರು, ಹೀಗಾಗಿ ರೋಗಿಗಳು ಸಾಯುತ್ತಿದ್ದರು. ತಮ್ಮ

ದೇವತೆಗಳ, ದೈವದ ಕ್ರಿಯೆಗೂ ಈ ರೋಗಕ್ಕೂ ಯಾವ ಸಂಬಂಧವಿಲ್ಲ ವೆಂಬುದು ಈ ಜನರಿಗೆ ಗೊತ್ತಿರಲಿಲ್ಲಾ. ಕಾಲರಾ ರೋಗ ದೇವತೆಯ ಕೋಪ ಗೊಂಡು ಬರುವಂತಹದಲ್ಲ,ಮನುಷ್ಯನ ಅಜಾಗರೂಕತೆಯಿಂದ ಬರುವ ವಿಚಾರ ವ ಗೆ ಗೊತ್ತಿರಲಿಲ್ಲಾ.

ಆದರೆ ಇಂದು ವಿಜ್ಞಾನ ಅತ್ಯಂತ ಮುಂದುವರೆದಿದೆ.ವೈದ್ಯಕೀಯ ಕ್ಷೇತ್ರ ವಿಸ್ತರಿಸಿ ನಿಂತಿದೆ. ಹೊಸ ಹೊಸ ರೋಗಗಳು, ಹೊಸ ಹೊಸ ಸಮಸ್ಯೆಗಳನ್ನು ತಂದೊಡ್ಡುವುದಕ್ಕೆ ಅಷ್ಟೇ ಹೊಸ ಹೊಸ ವಿಧಾನಗಳು ಆವಿಷ್ಕಾರಗಳು ಬಳಕೆ ಯಲ್ಲಿವೆ. ವಿಶಿಷ್ಠ ರೋಗಕ್ಕೆ ತಜ್ಞ ವೈದ್ಯರಿದ್ದಾರೆ,ಮುಂದುವರೆದ ಆಸ್ಪತ್ರೆಗಳಿವೆ ಅಲ್ಪಾಧುನಿಕ ಉಪಕರಣಗಳಿಂದ ಜನರಲ್ಲಿ ಇವೆಲ್ಲವುಗಳಲ್ಲಿ ನಂಬಿಕೆ ಅಪಾರ ವಾಗಿ ಮೂಡಿದೆ. ಮೂಢನಂಬಿಕೆಯ ಪ್ರಮಾಣ ತೀರಾ ಕಡಿಮೆಯಾಗಿದೆ. ಪ್ರತಿ ಯೊಂದಕ್ಕೂ ಏಕೆ, ಹೇಗೆ, ಎಲ್ಲಿ, ಏನುಗಳಿಗೆ ಸರಿಯಾಗಿ ಉತ್ತರ ದೊರಕಿಸಿ ಕೊಂಡಿದ್ದಾರೆ, ಈಗಿನ ಜನರು ರೋಗಗಳಿಗೆ ಹೆದರುವುದಿಲ್ಲ. ನೈರ್ಮಲ್ಯ ಕಾಪಾ ಡುತ್ತಾರೆ ಮುಂಜಾಗರೂಕತೆ ಕ್ರಮಗಳನ್ನು ತೆಗೆದುಕೊಳ್ಳುತ್ತಾರೆ.

## ಪ್ರಶ್ನೋತ್ತರಗಳು

1) ಪ್ರಪಂಚ ರೋಗ ಎಂದರೇನು ?

ಉತ್ತರ : ಸಾಂಕ್ರಾಮಿಕ ರೋಗ ಕೆಲವು ಸಲ ಒಂದು ಮೂಲೆಯಿಂದ ಹರಡಿ, ಹಲವಾರು ದೇಶಗಳಲ್ಲಿ ಕೋಟ್ಯಾಂತರ ಮಂದಿಗೆ ಹರಡಿ ರೋಗ ಪ್ರಪಂಚದ ಮತ್ತೊಂದು ಮೂಲೆಯನ್ನು ತಲುಪುತ್ತದೆ. ಇಂತಹ ಅಂಟುರೋಗ ಗಳಿಗೆ ಪ್ರಪಂಚ ರೋಗ ಎನ್ನುತ್ತಾರೆ.

2) ಹವೆಯ ಮೂಲಕ ರೋಗಾಣುಗಳು ಹೇಗೆ ಹಬ್ಬುತ್ತವೆ ?

ಉತ್ತರ: ಜೀವಿಗಳು ಉಸಿರಾಡುತ್ತವೆ. ಮನುಷ್ಯನೂ ಉಸಿರಾಡಿಸು

ತ್ತಾನೆ. ರೋಗಿಯು ಉಸಿರಾಡಿಸುತ್ತಾನೆ. ಉಸಿರಾಟದಿಂದ ರೋಗಿಯಿಂದ ರೋಗಾಣುಗಳು ಹೊರ ಬರುತ್ತವೆ. ಉಸಿರಾಟ ಕ್ರಿಯೆಯಲ್ಲಿ ಬೇರೊಬ್ಬ ವ್ಯಕ್ತಿಯ ಶರೀರವನ್ನು ಸೇರಿ ಅವನಲ್ಲಿ ರೋಗವನ್ನು ತರುತ್ತಾನೆ. ಈ ತೆರೆನಾದ ಕ್ರಿಯೆ ನಿರಂತರವಾಗಿ ಸಾಗುತ್ತಲೇ ಇರುತ್ತದೆ.

3) ನೀರು ಮತ್ತು ಆಹಾರಗಳ ಮೂಲಕ ಸಾಂಕ್ರಾಮಿಕ ರೋಗವಾದ ಕಾಲರಾ ಹೇಗೆ ಹರಡುತ್ತದೆ ?

**ಉತ್ತರ :** ಕಾಲರಾ ಪೀಡಿತ ವ್ಯಕ್ತಿಯ ಸಂಪರ್ಕದಿಂದ, ರೋಗಿಯ ಎಂಜಲು, ಮಲಮೂತ್ರಗಳಿಂದ ಹಾಗೂ ಮತ್ತೊಬ್ಬರು ಸೇವಿಸುವ ನೀರು ಅಥವಾ ಆಹಾರ ಕಲುಷಿತವಾಗಿ ರೋಗಾಣುಗಳು ವೃದ್ಧಿಗೊಂಡು ಸೇವಿಸಿದ ವ್ಯಕ್ತಿಯಲ್ಲಿ ರೋಗ ಕಾಣುತ್ತದೆ. ಈ ರೀತಿಯಿಂದ ಕಾಲರಾ ಹಬ್ಬುತ್ತದೆ.

4) ಕಾಲರಾ ವರ್ಷದ ಯಾವ ಅವಧಿಯಲ್ಲಿ ಹೆಚ್ಚಾಗಿ ಕಂಡು ಬರುತ್ತದೆ ?

**ಉತ್ತರ :** ಹವಾಗುಣಕ್ಕೂ ಹಾಗೂ ಕಾಲರಾ ಸಂಭವಿಸುವುದಕ್ಕೂ ನಿಕಟವಾದ ಸಂಬಂಧವಿರುತ್ತದೆ. ಇದರ ಹಾವಳಿ ಫೆಬ್ರವರಿ, ಮಾರ್ಚ ತಿಂಗಳಲ್ಲಿ ಕಡಿಮೆ ಇರುತ್ತದೆ. ಆಗಸ್ಟ ತಿಂಗಳಲ್ಲಿ ಹೆಚ್ಚಾಗಿರುತ್ತದೆ. ಮೇ ದಿಂದ ಅಕ್ಟೋಬರ್ ತಿಂಗಳ ಮಧ್ಯದಲ್ಲಿ ಈ ರೋಗದ ಬಾಧೆ ಇದ್ದೇ ಇರುತ್ತದೆ.

5) ಕಾಲರಾ ಸಾಮಾನ್ಯವಾಗಿ ಎಲ್ಲಿ ಕಾಣಿಸಿಕೊಳ್ಳುತ್ತದೆ ?

**ಉತ್ತರ :** ಜಾತ್ರೆ, ಉರುಸು, ಹಬ್ಬ ಹರಿದಿನಗಳ ನಂತರ ಈ ರೋಗ ಕಾಣಿಸಿಕೊಳ್ಳುತ್ತದೆ.

6) ಎಂತಹ ಪ್ರದೇಶಗಳಲ್ಲಿ ಕಾಲರಾ ಹೆಚ್ಚಾಗಿ ಕಂಡು ಬರುತ್ತದೆ ?

**ಉತ್ತರ :** ಕೊಳಚೆ ಗುಂಡಿ, ನಿಂತ ನೀರು ಪ್ರದೇಶಗಳಲ್ಲಿ, ಜನನಿಬಿಡ ವಸತಿಗಳಲ್ಲಿ, ಅಜ್ಞಾನ, ಬಡತನ ಇರುವ ಪ್ರದೇಶಗಳಲ್ಲಿ ಕಾಲರಾ ಹೆಚ್ಚಾಗಿ ಕಾಣಿಸಿಕೊಳುತ್ತದೆ.

7) ಕಾಲರಾ ರೋಗ ವಾಹಕರು ಎಂದರೇನು ?

**ಉತ್ತರ :** ಹಲವರು ನೋಡಲಿಕ್ಕೆ ಆರೋಗ್ಯವಂತರಾಗಿ ಕಾಣುತ್ತಾರೆ.

ಅವರಲ್ಲಿ ಕಾಲರಾದ ಯಾವ ಲಕ್ಷಣವೂ ಕಂಡು ಬರುವುದಿಲ್ಲ. ಆದರೆ ಅವರ ಮಲದೊಡನೆ ರೋಗಾಣುಗಳು ವಿಸರ್ಜಿತವಾಗುವವು ಇವರು ಇತರರಿಗೆ ರೋಗ ವನ್ನು ತರುತ್ತಾರೆ ಇಂಥವರಿಗೆ ರೋಗವಾಹಕರು ಎನ್ನುತ್ತಾರೆ.

8) ಚೇತರಿಕಾ ವಾಹಕರು ಎಂದರೇನು ?

ಉತ್ತರ : ಕಾಲರಾ ರೋಗ ತಗುಲಿ, ಚೇತರಿಸಿಕೊಂಡು ನಂತರದಲ್ಲೂ ಸ್ವಲ್ಪ ದಿವಸಗಳವರೆಗೆ ರೋಗಾಣುಗಳನ್ನು ವಿಸರ್ಜಿಸುತ್ತಾರೆ. ಇವರೇ ಚೇತರಿಕಾ ವಾಹಕರು. ಕಾಲರಾ ಸಂಪೂರ್ಣ ಗುಣವಾಗುವವರೆಗೂ ಚಿಕಿತ್ಸೆಯನ್ನು ಪಡೆಯದವರಿವರು. ಮೂರು ವಾರಗಳವರೆಗೂ ಈ ರೀತಿ ರೋಗಾಣುಗಳನ್ನು ವಿಸರ್ಜಿಸುತ್ತಿರುತ್ತಾರೆ.

9) ಸಂಪರ್ಕವಾಹಕರೆಂದರೆ ಎಂಥವರು ?

ಉತ್ತರ ಕಾಲರಾ ಪೀಡಿತ ರೋಗಿಗಳಿರುತ್ತಾರೆ. ಅವರನ್ನು ಉಪಚರಿಸಲು ಕೆಲವರಿರುತ್ತಾರೆ. ರೋಗಿಗೆ ಉಪಚರಿಸುವಾಗ ನಿಕಟ ಸಂಪರ್ಕ ಬರುತ್ತದೆ. ಇದರಿಂದ ರೋಗಾಣುಗಳ ಬಳುವಳಿ ಪಡೆಯುತ್ತಾರೆ. ಆದರೆ ಇವರು ರೋಗದಿಂದ ಬಳಲುವುದಿಲ್ಲ. ಮಲದೊಂದಿಗೆ ರೋಗಾಣುಗಳನ್ನು ವಿಸರ್ಜಿಸುತ್ತಾರೆ. ಇವರ ವಾಹಕತ್ವದ ಕಾಲಾವಧಿ ಹತ್ತು ದಿನಗಳು.

10) ದೀರ್ಘಕಾಲಿಕ ವಾಹಕರು ಎಂದರೆ ಯಾರಿವರು ?

ಉತ್ತರ : ಮೂರು ತಿಂಗಳಿಗಿಂತ ಹೆಚ್ಚು ಕಾಲದವರೆಗೆ ಕಾಲರಾ ರೋಗಾಣುಗಳಿಗೆ ಆಶ್ರಯದಾತರಿವರು. ಇಂಥವರಲ್ಲಿ ಪಿತ್ತಕೋಶ ಸೋಂಕಿನ ತವರಾಗಿರುತ್ತಾರೆ. ಲಭ್ಯವಿರುವ ಔಷಧಿಗಳು ಕರುಳಿನಲ್ಲಿ ನೆಲಿಸಿರುವ ರೋಗಾ ಣುಗಳನ್ನು ನಾಶಪಡಿಸುವವು. ಆದರೆ ಪಿತ್ತಕೋಶದಲ್ಲಿರುವ ರೋಗಾಣುಗಳನ್ನು ನಿರ್ನಾಮ ಮಾಡುವುದರಲ್ಲಿ ವಿಫಲವಾಗುವವು. ಇಂತಹ ವಾಹಕರು ನಿರಂತರ ವಾಗಿ ರೋಗಾಣುಗಳನ್ನು ವಿಸರ್ಜಿಸುತ್ತಾರೆ.

11) ಕಾಲರಾ ಏನನ್ನು ತಿಂದರೆ ಬರುತ್ತದೆ ?

ತ್ತಾನೆ. ರೋಗಿಯು ಉಸಿರಾಡಿಸುತ್ತಾನೆ. ಉಸಿರಾಟದಿಂದ ರೋಗಿಯಿಂದ ರೋಗಾಣುಗಳು ಹೊರ ಬರುತ್ತವೆ. ಉಸಿರಾಟ ಕ್ರಿಯೆಯಲ್ಲಿ ಬೇರೊಬ್ಬ ವ್ಯಕ್ತಿಯು ಶರೀರವನ್ನು ಸೇರಿ ಅವನಲ್ಲಿ ರೋಗವನ್ನು ತರುತ್ತಾನೆ. ಈ ತೆರೆನಾದ ಕ್ರಿಯೆ ನಿರಂತರವಾಗಿ ಸಾಗುತ್ತಲೇ ಇರುತ್ತದೆ.

3) ನೀರು ಮತ್ತು ಆಹಾರಗಳ ಮೂಲಕ ಸಾಂಕ್ರಾಮಿಕ ರೋಗವಾದ ಕಾಲರಾ ಹೇಗೆ ಹರಡುತ್ತದೆ ?

ಉತ್ತರ : ಕಾಲರಾ ಪೀಡಿತ ವ್ಯಕ್ತಿಯು ಸಂಪರ್ಕದಿಂದ, ರೋಗಿಯ ಎಂಜಲು, ಮಲಮೂತ್ರಗಳಿಂದ ಹಾಗೂ ಮತ್ತೊಬ್ಬರು ಸೇವಿಸುವ ನೀರು ಅಥವಾ ಆಹಾರ ಕಲುಷಿತವಾಗಿ ರೋಗಾಣುಗಳು ವೃದ್ಧಿಗೊಂಡು ಸೇವಿಸಿದ ವ್ಯಕ್ತಿಯಲ್ಲಿ ರೋಗ ಕಾಣುತ್ತದೆ. ಈ ರೀತಿಯಿಂದ ಕಾಲರಾ ಹಬ್ಬುತ್ತದೆ.

4) ಕಾಲರಾ ವರ್ಷದ ಯಾವ ಅವಧಿಯಲ್ಲಿ ಹೆಚ್ಚಾಗಿ ಕಂಡು ಬರುತ್ತದೆ ?

ಉತ್ತರ : ಹವಾಗುಣಕ್ಕೂ ಹಾಗೂ ಕಾಲರಾ ಸಂಭವಿಸುವುದಕ್ಕೂ ನಿಕಟವಾದ ಸಂಬಂಧವಿರುತ್ತದೆ. ಇದರ ಹಾವಳಿ ಫೆಬ್ರವರಿ, ಮಾರ್ಚ ತಿಂಗಳಲ್ಲಿ ಕಡಿಮೆ ಇರುತ್ತದೆ. ಅಗಸ್ಟ ತಿಂಗಳಲ್ಲಿ ಹೆಚ್ಚಾಗಿರುತ್ತದೆ. ಮೇ ದಿಂದ ಅಕ್ಟೋಬರ್ ತಿಂಗಳ ಮಧ್ಯದಲ್ಲಿ ಈ ರೋಗದ ಬಾಧೆ ಇದ್ದೇ ಇರುತ್ತದೆ.

5) ಕಾಲರಾ ಸಾಮಾನ್ಯವಾಗಿ ಎಲ್ಲಿ ಕಾಣಿಸಿಕೊಳ್ಳುತ್ತದೆ ?

ಉತ್ತರ : ಜಾತ್ರೆ, ಉರುಸು, ಹಬ್ಬ ಹರಿದಿನಗಳ ನಂತರ ಈ ರೋಗ ಕಾಣಿಸಿಕೊಳ್ಳುತ್ತದೆ.

6) ಎಂತಹ ಪ್ರದೇಶಗಳಲ್ಲಿ ಕಾಲರಾ ಹೆಚ್ಚಾಗಿ ಕಂಡು ಬರುತ್ತದೆ ?

ಉತ್ತರ : ಕೊಳಚೆ ಗುಂಡಿ, ನಿಂತ ನೀರು ಪ್ರದೇಶಗಳಲ್ಲಿ, ಜನನಿಬಿಡ ವಸತಿಗಳಲ್ಲಿ, ಅಜ್ಞಾನ, ಬಡತನ ಇರುವ ಪ್ರದೇಶಗಳಲ್ಲಿ ಕಾಲರಾ ಹೆಚ್ಚಾಗಿ ಕಾಣಿಸಿಕೊಳುತ್ತದೆ.

7) ಕಾಲರಾ ರೋಗ ವಾಹಕರು ಎಂದರೇನು ?

ಉತ್ತರ : ಹಲವರು ನೋಡಲಿಕ್ಕೆ ಆರೋಗ್ಯವಂತರಾಗಿ ಕಾಣುತ್ತಾರೆ.

ಅವರಲ್ಲಿ ಕಾಲರಾದ ಯಾವ ಲಕ್ಷಣವೂ ಕಂಡು ಬರುವುದಿಲ್ಲ. ಆದರೆ ಅವರ ಮಲದೊಡನೆ ರೋಗಾಣುಗಳು ವಿಸರ್ಜಿತವಾಗುವವೂ ಇವರು ಇತರರಿಗೆ ರೋಗ ವನ್ನು ತರುತ್ತಾರೆ ಇಂಥವರಿಗೆ ರೋಗವಾಹಕರು ಎನ್ನುತ್ತಾರೆ.

8) ಚೇತರಿಕಾ ವಾಹಕರು ಎಂದರೇನು ?

ಉತ್ತರ : ಕಾಲರಾ ರೋಗ ತಗುಲಿ, ಚೇತರಿಸಿಕೊಂಡು ನಂತರದಲ್ಲೂ ಸ್ವಲ್ಪ ದಿವಸಗಳವರೆಗೆ ರೋಗಾಣುಗಳನ್ನು ವಿಸರ್ಜಿಸುತ್ತಾರೆ.ಇವರೇ ಚೇತರಿಕಾ ವಾಹಕರು. ಕಾಲರಾ ಸಂಪೂರ್ಣ ಗುಣವಾಗುವವರೆಗೂ ಚಿಕಿತ್ಸೆಯನ್ನು ಪಡೆಯದವರಿವರು. ಮೂರು ವಾರಗಳವರೆಗೂ ಈ ರೀತಿ ರೋಗಾಣುಗಳನ್ನು ವಿಸರ್ಜಿಸುತ್ತಿರುತ್ತಾರೆ.

9) ಸಂಪರ್ಕವಾಹಕರೆಂದರೆ ಎಂಥವರು ?

ಉತ್ತರ ಕಾಲರಾ ಪೀಡಿತ ರೋಗಿಗಳಿರುತ್ತಾರೆ.ಅವರನ್ನು ಉಪಚರಿಸಲು ಕೆಲವರಿರುತ್ತಾರೆ. ರೋಗಿಗೆ ಉಪಚರಿಸುವಾಗ ನಿಕಟ ಸಂಪರ್ಕ ಬರುತ್ತದೆ. ಇದರಿಂದ ರೋಗಾಣುಗಳ ಬಳುವಳಿ ಪಡೆಯುತ್ತಾರೆ.ಆದರೆ ಇವರು ರೋಗದಿಂದ ಬಳಲುವುದಿಲ್ಲ. ಮಲದೊಂದಿಗೆ ರೋಗಾಣುಗಳನ್ನು ವಿಸರ್ಜಿಸುತ್ತಾರೆ. ಇವರ ವಾಹಕತ್ವದ ಕಾಲಾವಧಿ ಹತ್ತು ದಿನಗಳು.

10) ದೀರ್ಘಕಾಲಿಕ ವಾಹಕರು ಎಂದರೆ ಯಾರಿವರು ?

ಉತ್ತರ : ಮೂರು ತಿಂಗಳಿಗಿಂತ ಹೆಚ್ಚು ಕಾಲದವರೆಗೆ ಕಾಲರಾ ರೋಗಾಣುಗಳಿಗೆ ಆಶ್ರಯದಾತರಿವರು. ಇಂಥವರಲ್ಲಿ ಪಿತ್ತಕೋಶ ಸೋಂಕಿಸ ತವರಾಗಿರುತ್ತಾರೆ. ಲಭ್ಯವಿರುವ ಔಷಧಿಗಳು ಕರುಳಿನಲ್ಲಿ ನೆಲಿಸಿರುವ ರೋಗಾ ಣುಗಳನ್ನು ನಾಶಪಡಿಸುವವು.ಆದರೆ ಪಿತ್ತಕೋಶದಲ್ಲಿರುವ ರೋಗಾಣುಗಳನ್ನು ನಿರ್ನಾಮ ಮಾಡುವುದರಲ್ಲಿ ವಿಫಲವಾಗುವವು. ಇಂತಹ ವಾಹಕರು ನಿರಂತರ ವಾಗಿ ರೋಗಾಣುಗಳನ್ನು ವಿಸರ್ಜಿಸುತ್ತಾರೆ.

11) ಕಾಲರಾ ಏನನ್ನು ತಿಂದರೆ ಬರುತ್ತದೆ ?

ಉತ್ತರ : ಕಲುಷಿತ ನೀರನ್ನು ಕುಡಿಯುವುದರಿಂದ ಸೋಂಕುತಗುಲಿದ ಹಾಲು ಅಥವಾ ಆಹಾರ ಪದಾರ್ಥಗಳನ್ನು ತಿನ್ನುವುದರಿಂದ ಚರಂಡಿ ನೀರನ್ನು ಉಪಯೋಗಿಸಿಕೊಂಡು ತರಕಾರಿ, ಹಣ್ಣು, ಹಂಪಲಗಳನ್ನು ಚನ್ನಾಗಿ ತೊಳೆಯದೆ ತಿನ್ನು ದರಿಂದ ಈ ರೋಗ ಹರಡುತ್ತದೆ.

12) ಕಾಲರಾ ರೋಗದ ಅಧಿಶಯನ ಕಾಲ ಎಂದರೇನು ?

ಉತ್ತರ : ಕಾಲರಾ ರೋಗಾಣುಗಳು ದೇಹವನ್ನು ಸೇರಿದ ಕೂಡಲೇ ರೋಗಬರುವುದಿಲ್ಲ ರೋಗದ ಲಕ್ಷಣಗಳು ಕಾಣಿಸಲುಸ್ವಲ್ಪ ಕಾಲಾವಕಾಶವನ್ನು ತೆಗೆದುಕೊಳ್ಳುತ್ತದೆ ಈ ಕಾಲಕ್ಕೆ ಕಾಲದ ಆಧಿಶಯನ ಕಾಲ ಎನ್ನುತ್ತಾರೆ.

13) ಕಾಲರಾ ರೋಗದ ಹರಡುವಿಕೆಗೆ ಪರಿಸರ ಹೇಗೆ ಇರುತ್ತದೆ ?

ಉತ್ತರ : ಕಾಲರಾ ಸೋಂಕು ಮಲೀನ ನೀರು ಅಥವಾ ಆಹಾರದ ಸೇವನೆಯ ಫಲವಾಗಿ ಬರುತ್ತದೆ ನೊಣಗಳು, ಅನೈರ್ಮಲ್ಯ, ಅನಾರೋಗ್ಯಕರ ಜೀವನ ಪರಿಸ್ಥಿತಿ ಈ ರೋಗದ ಹರಡಿಕೆಗೆ ಪರಿಸರವನ್ನೊದಗಿಸುತ್ತದೆ.

14) ಉಗ್ರ ಕಾಲರಾ ಅಂದರೆ ಅದೆಂಥಾ ಕಾಲರಾವಾಗಿರುತ್ತದೆ ?

ಉತ್ತರ : ಸಾಂಕ್ರಾಮಿಕವಾಗಿ ಹರಡಿದ ಸಂದರ್ಭಗಳಲ್ಲಿ ನೂರಕ್ಕೆ ತೊಂಬತ್ತುರೋಗಿಗಳಲ್ಲಿ ಕಂಡು ಬರುತ್ತದೆ ಈ ಕಾಲರಾ ಏಕಾಏಕೀ ಪ್ರಾರಂಭವಾಗುತ್ತದೆ. ವೇಳೆ ಸೌಮ್ಯ ಲಕ್ಷಣಗಳು ಕಾಣಿಸಿಕೊಂಡು ನಂತರ ಉಗ್ರರೂಪ ಪಡೆಯುತ್ತದೆ. ಹಲವರಿಗೆ ಭೇದಿ ಹೆಚ್ಚಾಗುವುದಿಲ್ಲ. ಜಠರದಲ್ಲಿ ತಳಮಳ ಉಂಟಾಗಿ ವಾಕರಿಕೆ ಬರುತ್ತದೆ.

15) ಕಾಲರಾ ಭೇದಿ ಹೇಗಿರುತ್ತದೆ ?

ಉತ್ತರ ಈ ಕಾಯಿಲೆ ಸೌಮ್ಯ ಸ್ವರೂಪದ್ದಾಗಿರುತ್ತದೆ. ಈ ತೆರನಾದ ಕಾಲರಾ ಸೋಂಕಿಗೆ ತುತ್ತಾದ ರೋಗಿಗೆ ಅತಿಭೇದಿ, ವಾಂತಿಯಾಗುತ್ತದೆ. ಮೂತ್ರ ಉತ್ಪತ್ತಿಗೆ ತೊಂದರೆಯಾಗುವುದಿಲ್ಲ. ಈ ಕಾಯಿಲೆಯಿಂದ ಸಾವು ನೋವುಗಳು ಸಂಭವಿಸುವುದಿಲ್ಲ.

16) ಓ. ಆರ್. ಎಸ್ ಎಂದರೇನು ?

ಉತ್ತರ ಓರಲ್ ಡೀಹೈಡ್ರೇಷನ್ ಸಾಲ್ಟ್ ಎಂದು. ಇದನ್ನು ಮೌಖಿಕ ಪುನರ್ಜಲೀಕರಣ ಲವಣ ಎನ್ನುತ್ತಾರೆ.

17) ಮಕ್ಕಳ ಕಾಲರಾ ಹೇಗಿರುತ್ತದೆ ?

ಉತ್ತರ : ವಯಸ್ಸಾದವರಲ್ಲಿ ಕಂಡುಬರುವ ಲಕ್ಷಣಗಳು ಮಕ್ಕಳ ಕಾಲರಾದಲ್ಲಿ ಕಂಡುಬರುವುದಿಲ್ಲ. ಅಕ್ಕಿ ಗಂಜಿಯಂತೆ ಭೇದಿ ಆಗುವುದಿಲ್ಲ. ವಿಪರೀತ ಜ್ವರವಿರುತ್ತದೆ. ಮಬ್ಬು ಕವಿಯುತ್ತದೆ. ಸೆಳವುಗಳ ಹಾವಳಿ ತೀರಾ ಸಾಮಾನ್ಯ.ಹೀಗಾಗಿ ವೈದ್ಯರ ಗಮನ ಬೇರೆ ಕಡೆ ಹರಿಯುವಂತೆ ಮಾಡುತ್ತದೆ. ಸದ್ದಿಲ್ಲದೆ ಸಾವು ಮಕ್ಕಳಿಗೆ ಮುತ್ತಿಗೆ ಹಾಕುತ್ತದೆ. ಇದೇ ಮಕ್ಕಳ ಕಾಯಿಲೆ ಕಾಲರಾವಾಗಿರುತ್ತದೆ.

18) ಎಂಟೆರೋಟಾಕ್ಸಿನ್ ಎಂದರೇನು ? ವಿವರಿಸಿ.

ಉತ್ತರ : ಇದೊಂದು ವಿಷವಸ್ತುವಾಗಿರುತ್ತದೆ. ಮನುಷ್ಯ ಕಲುಷಿತವಾದ ನೀರು, ಆಹಾರ ಸೇವಿಸಿದಾಗ ಕಾಲರ ವಿಷಕ್ರಿಮಿಗಳು ಅವನ ಬಾಯಿಯ ಮುಖಾಂತರ ದೇಹವನ್ನು ಸೇರುತ್ತವೆ. ಸಣ್ಣ ಕರುಳಲ್ಲಿ ಈ ವಿಷ ಬಿಡುಗಡೆಯಾಗುತ್ತದೆ. ನಂತರ ಈ ವಿಷ ಕರುಳಿನ ಜೀವಕೋಶದಲ್ಲಿನ ಅಡೆನೈಲ್ ಸೈಕ್ಲೆಸ್ ಎಂಬ ವಸ್ತುವನ್ನು ಈ ಎಂಟೆರೋಟಾಕ್ಸಿನ್ ಪ್ರಚೋದಿಸುತ್ತದೆ. ಈಗ ಕರುಳಲ್ಲಿ ಸಿ. ಎ. ಎಂ. ಪಿ. ಎಂಬ ವಸ್ತುವಿನ ಪ್ರಮಾಣ ಹೆಚ್ಚಾಗುತ್ತದೆ. ಇದರ ಪ್ರಭಾವದಿಂದ ಸೋಡಿಯಂ ಮತ್ತು ಬೈ ಕಾರ್ಬೋನೇಟ್‌ಗಳು ಹೆಚ್ಚಿ ಒಂದು ತೆರನಾದ ದ್ರವ ಉಂಟಾಗುತ್ತದೆ. ಈ ದ್ರವವು ವಾಂತಿ–ಭೇದಿಯ ಮುಖಾಂತರ ವಿಸರ್ಜನವಾಗುತ್ತದೆ.

19) ಒಣ ಕಾಲರಾ ಯಾರಿಗೆ ಬರುತ್ತದೆ ?

ಉತ್ತರ : ವಯಸ್ಸಾದವರಲ್ಲಿ ಈ ರೋಗ ಕಾಣಿಸಿಕೊಳ್ಳುತ್ತದೆ, ಬಡಕಲು ದೇಹದವರ ಕೂಡ ಇದರ ಒಡನಾಟ ಹೆಚ್ಚು ಇರುತ್ತದೆ. ಈ ರೋಗಿ

ಗಳಲ್ಲಿ ವಾಂತಿ ಅಥವಾ ಭೇದಿ ಆಗುವುದಿಲ್ಲ. ಕಾಲರಾ ರೋಗದ ಲಕ್ಷಣಗಳು ಕಾಣುವ ಮೊದಲೇ ರೋಗಿ ಸಾಯುತ್ತಾನೆ. ಶ್ವಾಸಕೋಶದ ರಕ್ತನಾಳಗಳಲ್ಲಿ ರಕ್ತ ಹೆಪ್ಪುಗಟ್ಟುವುದರಿಂದ ರೋಗಿಗಳು ಸಾಯುತ್ತಾರೆ.

20) ಕಾಲರಾ ರೋಗ ಒಬ್ಬರಿಂದೊಬ್ಬರಿಗೆ ಹೇಗೆ ಹರಡುತ್ತದೆ ?

ಉತ್ತರ : ಕಾಲರಾ ತಗುಲಿದ ರೋಗಿಯ ಮಲದಲ್ಲಿ ವಾಂತಿಯಲ್ಲಿ ರೋಗದ ವಿಷಕ್ರಿಮಿಗಳಿರುತ್ತವೆ. ರೋಗಿಯ ಬಟ್ಟೆಬರೆಗಳು, ಇತರ ವಸ್ತುಗಳ ಸಂಪರ್ಕಕ್ಕೆ ಇತರ ವ್ಯಕ್ತಿಗಳು ಸಂಪರ್ಕಕ್ಕೆ ಬಂದರೆ ಅವನಿಗೂ ಈ ರೋಗ ಕ್ರಿಮಿಗಳು ಸೇರಿಕೊಳ್ಳುತ್ತವೆ. ಕ್ರಿಯೆ ಹೀಗೆಯೇ ಮುಂದುವರಿಯುತ್ತದೆ.

21) ಜೀವನ ಜಲ ಎಂಬ ಈ ದ್ರಾವಣಕ್ಕೆ ಹೆಸರು ಹೇಗೆ ಬಂದಿತು ?

ಉತ್ತರ ಅಂತರಾಷ್ಟ್ರೀಯ ಅತಿಸಾರ ಸಂಶೋಧನಾ ಕೇಂದ್ರವು ಬಂಗ್ಲಾ ದೇಶದ ಹಳ್ಳಿಯೊಂದರಲ್ಲಿ ಕಾರ್ಯ ಮಾಡಿತು, ಎರಡು ಸಾವಿರ ರೋಗಿಗಳಿಗೆ ಬಾಯಿಯಿಂದ ನೀರು ಮತ್ತು ಲವಣಗಳನ್ನು ಪೂರೈಸುವ ಚಿಕಿತ್ಸೆ ಮಾಡಿತು. ಇದು ನೂರಕ್ಕೆ ತೊಂಬತ್ತೈದು ರೋಗಿಗಳನ್ನು ಗುಣಪಡಿಸಿತು, ಅಡಿಗೆ ಉಪ್ಪು ಅಡಿಗೆ ಸೋಡಾ, ಸಕ್ಕರೆ, ಇವುಗಳನ್ನೇ ಉಪಯೋಗಿಸಿಕೊಂಡು ಚಿಕಿತ್ಸೆ ನೀಡುವ ಈ ಜಲವು ಜಗತ್ತನ್ನೇ ಕಣ್ತೆರೆಯುವಂತೆ ಮಾಡಿತು. ಎಷ್ಟೋ ಜನರ ಜೀವ ಉಳಿಸುವಂತೆ ಮಾಡಿದ ಈ ದ್ರಾವಣವನ್ನು ಜೀವನ ಜಲ ಎಂದು ಹೆಸರು ಗಳಿಸಿತು.

22) ಕಾಲರಾದ ದುಷ್ಪರಿಣಾಮಗಳಾವವು ?

ಉತ್ತರ : ಕಾಲರಾದಿಂದ ರಕ್ತ ಸಂಚಾರ ಕುಸಿಯುತ್ತದೆ. ಮೂತ್ರ ಪಿಂಡಗಳಲ್ಲಿ ಆಮ್ಲ ವಿಷಮತೆ ಆಗುತ್ತದೆ. ವಿಷಮಶೀತ ಜ್ವರದಂತಹ ಸ್ಥಿತಿ ಉಂಟಾಗುತ್ತದೆ. ಸಾವು ಸಂಭವಿಸುತ್ತದೆ. ಪಿತ್ತಕೋಶದ ಉರಿಯೂತ ಉಂಟಾ ಗುತ್ತದೆ. ಸಣ್ಣ ಶ್ವಾಸನಾಳ ಹಾಗೂ ಪುಪ್ಪುಸದ ಉರಿಯೂತವು ಉಂಟಾಗು ತ್ತದೆ ದೀರ್ಘಕಾಲ ಹಾಸಿಗೆಯ ಮೇಲೆ ಮಲಗುವುದರಿಂದ ಹಾಸಿಗೆ ಹುಣ್ಣು

ಗಳು ಕಾಣುತ್ತವೆ. ಗರ್ಭವತಿಯರು ಈ ರೋಗಕ್ಕೆ ತುತ್ತಾದರೆ ಗರ್ಭಪಾತ ವಾಗುತ್ತದೆ. ಕೆಲವರಲ್ಲಿ ವೇಳೆಗೆ ಮುಂಚೆಯೇ ಹೆರಿಗೆ ಆಗುತ್ತದೆ.ಕಾಲರಾ ಒಬ್ಬ ರಿಗೆ ತಗುಲಿತೆಂದರೆ ಮನೆಮಂದಿಗೆಲ್ಲಾ ಪಸರಿಸುವ ಸಂಭವ ಹೆಚ್ಚು, ರೋಗಿ ರೋಗವಿಲ್ಲದ ಕಡೆ ಹೋದರೆ ಅಲ್ಲಿಯೂ ರೋಗ ಹರಡುತ್ತಾನೆ.

23) ನೊಣಗಳಿಂದ ಕಾಲರಾ ಹೇಗೆ ಹೆಚ್ಚುತ್ತದೆ ?

**ಉತ್ತರ :** ಹೊಲಸೆಲ್ಲಿದೆಯೋ ಅಲ್ಲಿ ನೊಣಗಳಿರುತ್ತವೆ. ರೋಗ ಪ್ರಸಾರ ಮಾಡುವುದರಲ್ಲಿ ನೊಣಗಳ ಪಾತ್ರ ಹಿರಿದಾಗಿರುತ್ತದೆ. ನೊಣಗಳು ಸೋಂಕು ರೋಗದ ವಸ್ತುಗಳ ಮೇಲೆ ಕುಳಿತಿರುತ್ತವೆ. ನಂತರ ನಾವು ತಿನ್ನುಣ್ಣುವ ಪದಾರ್ಥಗಳ ಮೇಲೆ ಕುಳಿತುಕೊಳ್ಳುತ್ತವೆ. ನಾವು ಆ ಆಹಾರವನ್ನು ಸೇವಿಸಿ ದಾಗ ರೋಗ ನಮಗೆ, ನಮ್ಮಂತೆ ಇನ್ನೂ ಹಲವರಿಗೆ ರೋಗ ಹರಡುತ್ತಲೇ ಸಾಗುತ್ತದೆ.

24) ಕಾಲರಾ ತಡೆಗಟ್ಟಲು ಲಸಿಕೆ ಹೇಗೆ ಎಷ್ಟು ಪರಿಣಾಮಕಾರಿಯಾಗಿ ರುತ್ತದೆ ?

**ಉತ್ತರ :** ಕಾಲರಾ ರೋಗ ಒಂದು ಪ್ರದೇಶವನ್ನು ಪ್ರವೇಶಿಸಿತೆಂದರೆ ಆಯಿತುಲಸಿಕೆ ಹಾಕುವ ಕಾರ್ಯ ಪ್ರಾರಂಭಗೊಳ್ಳುತ್ತವೆ.ಜಾಗತಿಕ ಆರೋಗ್ಯ ಸಂಸ್ಥೆ ಕಾಲರಾ ತಡೆಗಟ್ಟಲು ಲಸಿಕೆ ಉಪಯೋಗವನ್ನು ಶಿಫಾರಸ್ಸು ಮಾಡಿರು ವುದಿಲ್ಲ. ಆದಾಗ್ಯೂ ಅದನ್ನು ವ್ಯಾಪಕವಾಗಿ ಲಸಿಕೆಯನ್ನು ಉಪಯೋಗಿಸು ತ್ತಾರೆ. ಈ ಲಸಿಕೆಯ ಸಾಮರ್ಥ್ಯದ ಬಗ್ಗೆ ಸಂಸ್ಥೆ ಅನುಮಾನಪಟ್ಟಿರುತ್ತದೆ. ಲಸಿಕೆ ತೆಗೆದುಕೊಂಡ ನೂರರಲ್ಲಿ ಕೇವಲ ಇಪತ್ತು ಜನರಲ್ಲಿಮಾತ್ರ ಪರಿಣಾಮ ಬೀರುತ್ತದೆ. ಈ ಲಸಿಕೆಯನ್ನು ಸರಿಯಾಗಿ ಕೊಡದಿದ್ದಲ್ಲಿ ಉಪಯೋಗಕ್ಕಿಂತ ಹಾನಿಯೇ ಹೆಚ್ಚು. ನೋವು,ಜ್ವರವಂತೂ ಸಾಮಾನ್ಯ ಎಡ್ಸ್ ಬರುವ ಸಾಧ್ಯತೆ ಗಳಿವೆ ಲಸಿಕೆ ಕೊಡುವುದು ಅಷ್ಟೊಂದು ಸಮರ್ಪಕವಾದುದಲ್ಲ ಎಂಬ ಅಭಿಪ್ರಾಯವಿರುತ್ತದೆ. ಅಪಾರ ಹಣ ಮಾತ್ರ ಖರ್ಚಾಗುತ್ತದೆ.

25) ಒಂದು ಪ್ರದೇಶದಲ್ಲಿ ಕಾಲರಾ ಇತ್ತೆಂದರೆ ಅಲ್ಲಿಯ ಸಂತೆ, ಜಾತ್ರೆ, ಹೋಟೆಲುಗಳನ್ನು ಬಂದು ಮಾಡುವುದು ಏಕೆ ?

ಉತ್ತರ : ಜಾತ್ರೆ, ಉರುಸು, ಸಂತೆ, ಉತ್ಸವ ಮುಂತಾದ ಪ್ರಸಂಗಗಳಲ್ಲಿ ಸಹಸ್ರಾರು ಜನರು ಸೇರುತ್ತಾರೆ.ತರತರಹದ ಜನರು,ರೋಗ ಪೀಡಿತರೂ ಇರುತ್ತಾರೆ. ಎಲ್ಲಿಂದಲೋ ಬಂದ ಕಾಲಾರಾ ರೋಗಿಗಳೂ ಇರಬಹುದು. ಇವರೆಲ್ಲರೂ ಹೋಟೆಲ್, ಸಿನಿಮಾ, ನಾಟಕಗಳಲ್ಲಿ ಪರಸ್ಪರ ಬೆರೆಯುತ್ತಾರೆ. ಈ ಪ್ರಸಂಗಗಳಲ್ಲಿ ಎಲ್ಲೆಡೆ ಹೊಲಸು ಕಂಡು ಬರುತ್ತದೆ. ರೋಗಿಗಳಿಂದ ಸೋಂಕು ಎಲ್ಲರಿಗೂ ಸೇರಿ ಕಾಲರಾ ಎಲ್ಲ ಪ್ರದೇಶಗಳಿಗೂ ಹರಡುವ ತಾಗುತ್ತದೆ. ಈ ಕಾರಣಕ್ಕಾಗಿಯೇ ಇವೆಲ್ಲವುಗಳನ್ನು ಬಂದು ಮಾಡುತ್ತಾರೆ.

26) ಬೇಸಿಗೆ ಕಾಲದಲ್ಲಿಯೇ ಕಾಲರಾ ಏಕೆ ಹೆಚ್ಚು ಹರಡುತ್ತದೆ ?

ಉತ್ತರ : ಬೇಸಿಗೆಯಲ್ಲಿ ನೀರಿನ ಕೊರತೆ ಇರುತ್ತದೆ. ಕಾರಣ ಸ್ವಚ್ಛತೆ ಕಾಪಾಡುವುದು ಆಗುವುದಿಲ್ಲ. ಕೊಳೆಗೇರಿಗಳಲ್ಲಿ ಪರಿಸರ ಕೆಟ್ಟು ದುರ್ನಾತ ಹರಡುತ್ತದೆ. ಅಲ್ಲಿಯ ಜನ ತಾವು ಬಳಸುವ ನೀರು, ಆಹಾರದ ಬಗ್ಗೆ ಕಾಳಜಿ ಇರುವುದಿಲ್ಲ. ಬೇಸಿಗೆಗಿಂತಲೂ ಕೊಳಚೆ ಪ್ರದೇಶಗಳಲ್ಲಿ ಕಾಲರಾ ಹೆಚ್ಚಾಗಿ ಕಾಣಿಸಿಕೊಳ್ಳುತ್ತದೆ.

27) : ಕಾಲರಾ ಚುಚ್ಚುಮದ್ದನ್ನು ಯಾರು, ಯಾವಾಗ ಕಂಡು ಹಿಡಿದರು?

ಉತ್ತರ : 1892 ರಲ್ಲಿ ಫೆರಾನ್ ಎಂಬ ವಿಜ್ಞಾನಿ ಕಂಡು ಹಿಡಿದನು.

28) ಪ್ರಪಂಚದ ಯಾವ ಯಾವ ಭಾಗಗಳಲ್ಲಿ ಕಾಲರಾ ಪದೆ ಪದೆ ಕಾಣಿಸಿಕೊಳ್ಳುತ್ತದೆ ?

ಉತ್ತರ : ಕಾಲರಾ ರೋಗ ಭಾರತ, ಬಂಗ್ಲಾದೇಶ, ಪಾಕಿಸ್ತಾನ, ಥೈಲ್ಯಾಂಡ್ ಮತ್ತಿತರ ಆಗ್ನೇಶಿಯಾದ ರಾಷ್ಟ್ರಗಳಲ್ಲಿ ಮತ್ತು ಮಧ್ಯ ಪೂರ್ವ ಏಶಿಯಾ ರಾಷ್ಟ್ರಗಳಲ್ಲಿ ಸದಾ ಕಾಣಿಸಿಕೊಳ್ಳುತ್ತದೆ. ಆಗಾಗ್ಗೆ ಈ ರೋಗ ಪಿಡುಗು ರೂಪಧರಿಸಿ ಅನೇಕ ರಾಷ್ಟ್ರಗಳಲ್ಲಿ ಗೋಚರಿಸುತ್ತದೆ. ಭಾರತದ

ಗಂಗಾನದಿ ಮತ್ತು ಚೀನದ ಯಾಂಗ್‌ಟಿಸಿ ನದಿಯು ಜಲಾಶಯದ ಪ್ರದೇಶ ಈ ಸೋಂಕಿನ ಮೂಲವಾಗಿರುತ್ತದೆ.

29) ಹಳ್ಳಿಗಳಲ್ಲಿ ಕೆರೆಯ ಮೂಲದಿಂದ ನೀರನ್ನು ಉಪಯೋಗಿಸುವುದರಿಂದ ಕಾಲರಾ ಹೇಗೆ ಹಬ್ಬುತ್ತದೆ ?

ಉತ್ತರ : ಹಳ್ಳಿಗಳಲ್ಲಿ ಕೆರೆಗಳೊಂದೇ ಸಮಸ್ತ ನೀರಿನ ಆಗರವಾಗಿರುತ್ತದೆ.ಅಲ್ಲಿಯ ಜನರು ಇದೇ ನೀರನ್ನು ಕುಡಿಯಲು, ಬಳಕೆಗೂಬಳಸುತ್ತಾರೆ. ಬಟ್ಟೆಗಳನ್ನು ಒಗೆಯುತ್ತಾರೆ.ಪಾತ್ರೆಗಳನ್ನು ತೊಳೆಯುತ್ತಾರೆ.ಇದೇ ಕೆರೆಯಲ್ಲಿ ದನಗಳ ಮೈಯನ್ನು ತೊಳೆಯುತ್ತಾರೆ. ತಾವೂ ಸ್ನಾನ ಮಾಡುತ್ತಾರೆ. ಆರೋಗ್ಯದ ದೃಷ್ಟಿಯಿಂದ ಇದು ಅತ್ಯಂತ ಕೊಳಕು ನೀರಾಗಿರುತ್ತದೆ. ರೋಗಾಣುಗಳ ಆಗರವಾಗಿರುತ್ತದೆ. ಈ ಕೆರೆ.ಹೀಗಾಗಿ ಕಾಲರಾ ಹಬ್ಬಿಸುವಂತ ಈ ಕೆರೆ ಕೊಳಚೆಯಾಗಿ ನಿಂತಿರುತ್ತದೆ.

30) ರೋಗ ನಿರೋಧ ಏಕೆ ಮತ್ತು ಹೇಗೆ ವಿವರಿಸಿ.

ಉತ್ತರ ಹಲವಾರು ಪರಿಣಾಮಕಾರಿ ನಿರೋಧ ಮಾರ್ಗಗಳನ್ನು ಅನುಸರಿಸಿ.ಹಲವಾರು ರೋಗಗಳನ್ನು ನಿರ್ಮೂಲನ ಗೊಳಿಸಲು, ಅಂಕಿತದಲ್ಲಿಟ್ಟು ಕೊಳ್ಳಲು ಸಾಧ್ಯವಾಗಿದೆ. ರೋಗಿಯನ್ನು ಪ್ರತ್ಯೇಕವಾಗಿಡುವುದು ರೋಗ ನಿರೋಧದ ಒಂದು ಮಾರ್ಗ ಮನೆಯಲ್ಲೇ ಇದ್ದು ಆರೋಗ್ಯ ನಿಯಮದಂತ ಉಪಚಾರವನ್ನು ಪಡೆಯುವುದು, ವಾತಾವರಣವನ್ನು ಸ್ವಚ್ಛವಾಗಿಡುವುದು. ಶುದ್ಧ ನೀರು ಪೂರೈಸುವುದು,ರೋಗಿಗೆ ರೋಗಕ್ಕೆ ತಕ್ಕಂತೆ ಚಿಕಿತ್ಸೆ ನೀಡುವುದು ಆಗಿರುತ್ತದೆ. ರೋಗ ನಿರೋಧದಲ್ಲಿ ಮತ್ತೊಂದು ಅತಿ ಮುಖ್ಯ ಮಾರ್ಗ, ರೋಗಿಯಾಗಬಹುದಾದ ವ್ಯಕ್ತಿಯ ರೋಗ ನಿರೋಧ ಬಲವನ್ನುಹೆಚ್ಚಿಸುವುದು ಉತ್ತಮ ಗಾಳಿ, ಆಹಾರ, ವ್ಯಾಯಾಮಗಳಿಂದ ಉತ್ತಮ ಆರೋಗ್ಯ ಕಾಪಾಡಿ ಕೊಂಡರೆ ರೋಗ ನಿರೋಧಕ ಬಲವು ಹೆಚ್ಚಾಗುತ್ತದೆ. ರಕ್ತದಲ್ಲಿರುವ ರೋಧ ವಸ್ತುವನ್ನು ಹೆಚ್ಚಿಸುವುದು ಆಗಿರುತ್ತದೆ.

# ಈ ಸಂಗತಿಗಳನ್ನು ನೀವು ತಿಳಿದಿರಬೇಕು

1) ಕೊಳಕು ಅಡುಗೆಯವನು ನಮಗೆ ಭೇದಿಯನ್ನು ಕೊಡುತ್ತಾನೆ.

2) ಪರಿಶುದ್ಧವಾದ ನೀರು, ಸ್ವಚ್ಛವಾದ ಆಹಾರ,ಎಲ್ಲೆಡೆ ನೈರ್ಮಲ್ಯ ವಾತಾವರಣ ಕಾಲರಾವನ್ನು ತಡೆಗಟ್ಟುತ್ತದೆ.

3) ತೀವ್ರತೆರನಾದ ವಾಂತಿ, ಬೇದಿಯಿಂದ ದೇಹದಲ್ಲಿನ ದ್ರವ ವಿಸರ್ಜನ ಹೊಂದಿ ದೇಹವನ್ನು ತಲ್ಲಣಿಸುವ ಕಾಲರಾ ವಿಬ್ರಿಯೋ ಕಾಲರಾ ಎಂಬ ಬ್ಯಾಕ್ಟೀರಿಯಾ ಸಣ್ಣ ಕರುಳಿನಲ್ಲಿ ಉಂಟು ಮಾಡುವ ಉರಿತದ ಫಲವಾಗಿ ಉಂಟಾಗುತ್ತದೆ.

4) ಜನರು ಹೆಚ್ಚಿನ ಸಂಖ್ಯೆಯಲ್ಲಿ ಸೇರುವ ಜಾತ್ರೆ, ಸಂತೆ ಕಾಲದಲ್ಲಿ ಕಾಲರಾ ಸಾಮಾನ್ಯ.

5) ರೋಗದಿಂದ ನರಳುವ ಅಥವಾ ಚೇತರಿಸಿಕೊಳ್ಳುತ್ತಿರುವ ವ್ಯಕ್ತಿ ತನ್ನ ಮಲದಲ್ಲಿ ವಿಸರ್ಜಿಸುವ ರೋಗಾಣುಗಳು ಕಾಲರಾಕ್ಕೆ ಕಾರಣ ವಾಗುತ್ತವೆ.

6) ಕಾಲರಾ ಸೋಂಕು ಮಲೀನ ನೀರು ಅಥವಾ ಆಹಾರ ಸೇವನೆಯ ಫಲವಾಗಿ ಬರುತ್ತದೆ.

7) ನೊಣಗಳು ಅನೈರ್ಮಲ್ಯ, ಅನಾರೋಗ್ಯಕರ ಜೀವನ ಪರಿಸ್ಥಿತಿ ಈ ರೋಗದ ಹರಡಿಕೆಗೆ ಪರಿಸರವನ್ನು ಒದಗಿಸುತ್ತವೆ.

8) ಸ್ವಚ್ಛತೆಯನ್ನು ನಾವು ಕಾಪಾಡಿದರೆ, ಸ್ವಚ್ಛತೆ ನಮ್ಮನ್ನು ಕಾಪಾಡುತ್ತದೆ.

9) ಪ್ಲೇಗು, ಸಿಡುಬಿನಂತಹ ಎಷ್ಟೋ ಹಳೆಯ ರೋಗಗಳು ಈಗ ಹೇಳಿ ಹೆಸರಿಲ್ಲದಂತಾಗಿವೆ. ಆದರೆ ಕೆಲವು ಮಾತ್ರ ಇನ್ನೂ ಬದುಕಿಕೊಂಡೇ ಬಂದಿವೆ. ಇಂಥವುಗಳಲ್ಲಿ ಕಾಲರಾವೂ ಒಂದು.

10) ವಿಶ್ವದ ಬಹುತೇಕ ರಾಷ್ಟ್ರಗಳ ಜನರು ಕಾಲರಾ ಕಾಟವನ್ನು ಅನುಭವಿಸಿದ್ದಾರೆ.

11) ಮನುಷ್ಯ ಕಲುಷಿತವಾದ ನೀರು, ಆಹಾರವನ್ನು ಸೇವಿಸಿದಾಗ ಕಾಲರಾ ವಿಷಕ್ರಿಮಿಗಳು ಅವನ ಬಾಯಿಯ ಮೂಲಕ ದೇಹವನ್ನು ಸೇರುತ್ತವೆ.

12) ಕಾಲರಾ ರೋಗಿ ಹಾಗೂ ಅತಿಸಾರದ ರೋಗಿಗಳಿರ್ವರೂ ಪದೆ ಪದೆ ಮಲ ವಿಸರ್ಜನೆ ಮಾಡಿಕೊಳ್ಳುವುದರಿಂದ ಇಬ್ಬರಲ್ಲೂ ಲವಣಾಂಶಗಳು ಕಡಿಮೆಯಾಗುತ್ತವೆ.

13) ಕಾಲರಾ ರೋಗಿಯ ಮಲದಲ್ಲಿ, ವಾಂತಿಯಲ್ಲಿ ಕಾಲರಾ ರೋಗದ ವಿಷ ಕ್ರಿಮಿಗಳಿರುತ್ತವೆ.

14) ಆರೋಗ್ಯವಂತರೂ ಇವರ ಮಲ ಮೂತ್ರಗಳ ಸಂಪರ್ಕ್ಕೆ ಬಂದರೆ ಇವರಿಗೂ ಕಾಲರಾ ತಗಲುತ್ತದೆ.

15) ಕಾಲರಾ ರೋಗವನ್ನು ಹರಡುವಲ್ಲಿಯ ಮಳೆಯೂ ಪಾತ್ರ ಹಿರಿದಾಗಿರುತ್ತದೆ. ಮಳೆ ನೀರಿನಲ್ಲಿ ಕಾಲರಾ ರೋಗಿಯ ಮಲ, ವಾಂತಿಗಳು ತೇಲಿ ಅನ್ಯ ಪ್ರದೇಶ ತಲುಪುತ್ತವೆ.

16) ವಿಶ್ವ ಆರೋಗ್ಯ ಸಂಸ್ಥೆಯ ತಜ್ಞರು ಇತ್ತೀಚಿಗೆ ಕಾಲರಾ ಚುಚ್ಚು ಮದ್ದು ಅಂತಹ ಪರಿಣಾಮಕಾರಿ ಸಾಧನವಲ್ಲ ಎಂದು ಅಭಿಪ್ರಾಯ ಪಟ್ಟಿದ್ದಾರೆ.

17) ಕಾಲರಾ ರೋಗದ ಹಾವಳಿ ಇರುವಾಗ ಸಂತೆ, ಜಾತ್ರೆ,ಉರುಸು, ಉತ್ಸವ, ಸಿನೆಮಾ,ನಾಟಕಗಳನ್ನು ಹೋಟೆಲುಗಳನ್ನು ನಿಷೇಧ ಮಾಡುತ್ತಾರೆ.

18) ಕಾಲರಾ ಒಬ್ಬರಿಂದ ಒಬ್ಬರಿಗೆ ಸುಲಭವಾಗಿ ಹರಡಿ ಸಾಕಷ್ಟು ಅವಾಂತರ ಮಾಡುವ ಆತಂಕಕಾರಿ ರೋಗವಾಗಿರುತ್ತದೆ.

19) ಪರಿಸರವನ್ನು ಕೆಡಿಸಿ, ಆರೋಗ್ಯವನ್ನು ಕೆಡಿಸಿಕೊಳ್ಳುವುದು ಅನಾರೋಗ್ಯದ ಕ್ರಮವು ಹಾಗೂ ಅನಾಗರೀಕತೆಯೂ ಆಗಿರುತ್ತದೆ.

20) ಕೊಳಚೆ ಪ್ರದೇಶ, ಜನ ನಿಬಿಡ ವಸತಿ ಇರುವಲ್ಲಿ ಕಾಲರಾದ ಉಪಟಳ ಹೆಚ್ಚಾಗಿರುತ್ತದೆ.

21) ಕಾಲರಾಕ್ಕೆ ಸಣ್ಣವರು, ದೊಡ್ಡವರು, ಎಂಬ ತಾರತಮ್ಯ ಇರುವುದಿಲ್ಲ.

22) ಕಾಲರಾ ರೋಗ ಬರುವುದಕ್ಕೆ ಬಡವ ಬಲ್ಲಿದರೆಂಬ ಭೇದಭಾವ ವಿರುವುದಿಲ್ಲ.

23) ಕಾಲರಾ ಕ್ರಿಮಿ ಸೂರ್ಯನ ಬೆಳಕಿಗೆ ಮೈಯೊಡ್ಡಿದಾಗ ಸಾಯುತ್ತದೆ.

24) ರೋಗ ಮತ್ತು ರೋಗ ವಾಹಕರು ಸೋಂಕಿನ ಮೂಲ ವಾಗಿರುತ್ತಾರೆ.

25) ಕಾಲರಾ ರೋಗ ಪ್ರಸಾರ ತಡೆಯಲು ಒಂದು ಉತ್ತಮ ಮಾರ್ಗವೆಂದರೆ ಕುಡಿಯಲು ಕೊಳವೆ ಭಾವಿ ನೀರನ್ನು ಬಳಸುವುದು.

26) ಇಂದಿನ ವೇಗ ಗತಿಯಿಂದ ಸಾಗುವ ಯುಗದಲ್ಲಿ ಒಂದು ದೇಶದ ರೋಗ ವಾಹಕರ ಮುಖಾಂತರ ಮತ್ತೊಂದು ದೇಶಕ್ಕೆ ಈ ರೋಗ ವೇಗವಾಗಿ ಹರಡುತ್ತದೆ.

27) ಕಾಲರಾ ರೋಗಾಣುಗಳು ಬಿಡುಗಡೆ ಮಾಡುವ ವಿಷವಸ್ತು ಕರುಳಿನ ಮೇಲೆ ನೇರ ಪ್ರಭಾವ ಬೀರುತ್ತದೆ.

28) ಕಾಲರಾ ಸಿಂದ್ರೋಮ್ ಕಾಲರಾದ ಒಂದು ಮಾದರಿ.

29) ಕಾಲರಾ ರೋಗ ತಗುಲಿತೆಂದರೆ ಮೊದಲು ಚಿಕ್ಕ ಮಕ್ಕಳು, ಗರ್ಭವತಿಯರು, ವಯಸ್ಸಾದವರು, ಕುಡುಕರು, ಅಶಕ್ತರು, ಮೂತ್ರ ಪಿಂಡದ ರೋಗಿಗಳು ಈ ರೋಗಕ್ಕೆ ತುತ್ತಾಗುತ್ತಾರೆ.

30) ಕಾಲರಾ ರೋಗಿಗೆ ಜೀವನಾವಶ್ಯಕ ನೀರು, ಲವಣಾಂಶಗಳನ್ನು ಕೊಟ್ಟು ಪ್ರಾಣ ಉಳಿಸುವಲ್ಲಿ ಎಲ್ಲರೂ ಸಹಕರಿಸಬೇಕು.

31) ಜೀವನ ಜಲದ ಉಪಯೋಗದಿಂದ ಕಾಲರಾದ ಆಹಾಕಾರವನ್ನು ಹತ್ತಿಕ್ಕಬಹುದು.

32) ಕಾಲರಾ ತಡೆಗಟ್ಟಬಹುದಾದ ಕಾಯಿಲೆಯಾಗಿರುತ್ತದೆ. ಅದು ಬರದಂತೆ ತಡೆಗಟ್ಟುವುದೇ ನಮ್ಮೆಲ್ಲರ ಮುಖ್ಯ ಕರ್ತವ್ಯವಾಗಿರುತ್ತದೆ.

33) ಸಾರ್ವಜನಿಕ ಸ್ಥಳಗಳಾದ ಶಾಲೆ, ಮಠ, ಮಂದಿರಗಳ ಸುತ್ತ ಮಲ, ಮೂತ್ರಗಳನ್ನು ಮಾಡಬಾರದು.

34) ರೋಗಿಯು ಕೆಮ್ಮುವಾಗ ಮುಖಕ್ಕೆ ಬಟ್ಟೆಯನ್ನು ಹಿಡಿದು ಕೊಳ್ಳಬೇಕು.

35) ರೋಗಿಯನ್ನು ಉಪಚರಿಸುವವರು ಕೂಡಾ ಮುಖಕ್ಕೆ ಬಟ್ಟೆಯನ್ನು ಕಟ್ಟಿಕೊಳ್ಳಬೇಕು.

36) ದಿನ ನಿತ್ಯವೂ ಎಲ್ಲರೂ ಸ್ನಾನ ಮಾಡಬೇಕು. ಶುದ್ಧ ಹವೆಯಲ್ಲಿ ತಿರುಗಾಡಬೇಕು. ವ್ಯಾಯಾಮ ಮಾಡಬೇಕು.

37) ಆಹಾರವನ್ನು ಬಡಿಸುವಾಗ ಕೈಯಿಂದ ಅಡುಗೆಯನ್ನು ಮುಟ್ಟಬಾರದು.

38) ವಾತಾವರಣದ ಮಡಿಲಲ್ಲಿರುವ ನಾವು ನಿಜವಾಗಿಯೂ ಸೂಕ್ಷ್ಮ ಜೀವಾಣುಗಳ ಸಾಗರದಲ್ಲಿ ಈಜುತ್ತಿರುತ್ತೇವೆ.

39) ದೇಶ ಮುಂದುವರಿದಂತೆ ಅಂಟು ರೋಗಗಳ ಹರಡುವ ಪ್ರಮಾಣ ಕಡಿಮೆಯಾಗುತ್ತ ನಡೆಯುತ್ತದೆ.

40) ವಯಸ್ಸಾದಂತೆ, ಶರೀರದಲ್ಲಿ ಹಲವಾರು ಬದಲಾವಣೆಗಳಾಗುತ್ತವೆ. ಈ ಬದಲಾವಣೆಗಳಿಂದ ರೋಗಗಳು ಬರುತ್ತವೆ.

41) ನಾವು ಉಸಿರಾಡುವ ಗಾಳಿಯಲ್ಲಿ, ಕುಡಿಯುವ ನೀರಿನಲ್ಲಿ ಮತ್ತು ತಿನ್ನುವ ಆಹಾರದಲ್ಲಿ ಅನೇಕ ಕ್ರಿಮಿಗಳಿರುತ್ತವೆ.

42) ರೋಗಕಾರಕ ಕ್ರಿಮಿ ಸ್ವಾಭಾವಿಕನಾಗಿ ಇರುವ ಒಂದು ಪ್ರದೇಶ ದಲ್ಲಿ ಅಲ್ಲಿ ರೋಗ ಸದಾಕಾಲವೂ ಉಂಟಾಗಲು ಕಾರಣವಾಗಬಹುದು.

43) ಸಾಂಕ್ರಾಮಿಕ ರೋಗಗಳ ಮೇಲೆ ನಮ್ಮ ಯುದ್ಧ ಬಹುಮುಖ ವಾಗಬೇಕು. ಎಲ್ಲರೂ ಆರೋಗ್ಯ ನಿಯಮಗಳನ್ನು ಪಾಲಿಸಬೇಕು. ಅಂದಾಗ ವ್ಯಕ್ತಿ ತನ್ನ ಆರೋಗ್ಯವನ್ನು ರಕ್ಷಿಸಿಕೊಳ್ಳುವುದಲ್ಲದೆ ಸಮಾಜದ ಸ್ವಾಸ್ಥ್ಯ ವನ್ನೂ ಕಾಪಾಡುತ್ತಾನೆ.

ಉಪಸಂಹಾರ : ಕಾಲರಾ ಕಾಲಿಟ್ಟಿತೆಂದರೆ, ಎಲ್ಲೆಲ್ಲೂ ಆಹಾಕಾರ, ಗೊಂದಲ, ಉಪಚಾರ, ಚುಚ್ಚುಮದ್ದುಗಳ ಉಪಯೋಗ, ಎಲ್ಲಕಡೆಗೂ ಸ್ವಚ್ಛತೆ, ಕೊಳಚೆಗಳ ನಿರ್ಮೂಲನೆ ಮುಂತಾದವುಗಳು ಪ್ರಾರಂಭವಾಗುತ್ತವೆ. ಏಕೆಂದರೆ ಕಾಲರಾ ಒಂದು ಸಾಂಕ್ರಾಮಿಕ ರೋಗ. ಕೇವಲ ಕಾಲರಾ ಬಂದ ವ್ಯಕ್ತಿಯೊಬ್ಬನೇ ರೋಗದಿಂದ ಬಳಲಬೇಕೆಂದಿಲ್ಲ. ಆರೋಗ್ಯವಂತನಾಗಿ ಓಡಾ ಡುವ ಮನುಷ್ಯರು ಈ ರೋಗದಿಂದ ಪೀಡಿತನಾಗುತ್ತಾನೆ. ಕಾರಣ, ಸ್ವಚ್ಛತೆ, ತಿಂಡಿತಿನುಸುಗಳಲ್ಲಿ ಸಂಪೂರ್ಣ ಎಚ್ಚರ, ಕೊಳಚೆಗಳ ನಿರ್ಮೂಲನೆ ಮುಂತಾದ ಮನುಷ್ಯನ ಕೈಯಲ್ಲಿರುವ ಕಾರ್ಯಗಳನ್ನಾದರೂ, ಕಾಲರಾ ಬಂದ ಮೇಲೆಯೇ ಮಾಡುವುದೇಕೆ? ಪ್ರಾರಂಭದಿಂದಲೂ,ಸದಾವಕಾಲವು ಇರಲು ಸಾಧ್ಯವಾಗುವು ದಿಲ್ಲವೇ ? ಸಾಧ್ಯವಾಗಲೇಬೇಕು ಇಲ್ಲದಿದ್ದಲ್ಲಿ ನಾವು ನಮ್ಮನ್ನು ಹಾಳು ಮಾಡಿಕೊಳ್ಳುವುದಲ್ಲದೆ ಆರೋಗ್ಯದಿಂದ ಇರಬೇಕೆಂದು ಬಯಸುವ ಜನರ ಆರೋಗ್ಯವನ್ನು ಕೆಡಿಸುತ್ತೇವೆ. ಅವರ ಪರಿಸರವನ್ನೂ ಹಾಳುಮಾಡುತ್ತೇವೆ. ಕಾಲರಾದಿಂದ ಪೀಡಿತ ವ್ಯಕ್ತಿಯಲ್ಲಿ ವಾಂತಿ, ಭೇದಿಯ ಮೂಲಕ ದೇಹದಲ್ಲಿಯ ನೀರು ಹೊರಹೋಗುತ್ತದೆ. ಲವಣಾಂಶಗಳ ಕೊರತೆ ಆಗುತ್ತದೆ. ನೀರಡಿಕೆ ಹೆಚ್ಚುತ್ತದೆ. ದೇಹದಲ್ಲಿ ಸೆಡತ ಕಾಣುತ್ತದೆ. ಕೈ ಕಾಲುಗಳು ಜೋಮು ಹಿಡಿ ಯುತ್ತವೆ. ಮೂತ್ರ ವಿಸರ್ಜಿಸುವ ಕ್ರಿಯೆ ಕಡಿಮೆಯಾಗುತ್ತದೆ. ಮನುಷ್ಯ ಸುಸ್ತಾಗುತ್ತಾನೆ. ಮಂಕು ಮೂಡುವುದು. ಮಾತು ಆಡಲೂ ಆಗದೆ ರೋಗಿ ಯಾಗಿ ಕುಸಿದು ಬೀಳುತ್ತಾನೆ ಯೋಗ್ಯ ಉಪಚಾರವಾಗದಿದ್ದಲ್ಲಿ ರೋಗಿ ಸಾಯುತ್ತಾನೆ. ಹೀಗೆ ನಮ್ಮ ಅಜ್ಞಾನದಿಂದ, ರೋಗದಿಂದ ಬದುಕಲೂ ಸಾಧ್ಯವಿದ್ದಾಗ್ಯೂ ಸಾವನ್ನು ನಾವು ಸುಲಭವಾಗಿ ಸ್ವಾಗತಿಸಬಾರದು. ವೈದ್ಯ

ವಿಜ್ಞಾನ ಪ್ರಪಂಚಕ್ಕೆ ಸಾಕಷ್ಟು ಬೆಳಕು ನೀಡುವ ಸಾಧನಗಳು ಈಗ ಅಸ್ತಿತ್ವ ದಲ್ಲಿರುವಾಗ ನಾವು ಸುಮ್ಮನೆ ದೇವರ ಇಚ್ಛೆಯೆಂದು ಕೈಕಟ್ಟಿ ಕುಳಿತುಕೊಳ್ಳ ಬಾರದು. ಕಾಲರಾ ಹೇಗೆ ಬರುವುದು, ಅದನ್ನು ನಿಯಂತ್ರಿಸಲು ಯಾವ ಮುಂಜಾಗ್ರತೆಗಳನ್ನು ತೆಗೆದುಕೊಳ್ಳಬೇಕು ಎಂದು ತಿಳಿದುಕೊಳ್ಳಬೇಕು.

ನಿಯಂತ್ರಣದಲ್ಲಿ ಒಂದಕ್ಕೊಂದು ವಿಷಯಗಳೂ ಪೂರಕವಾಗಿರುತ್ತವೆ. ಒಂದನ್ನು ಸಾಧಿಸಲು ಹೋಗಿ ಮತ್ತೊಂದನ್ನು ಕೈಬಿಡುವಂತಿರುವುದಿಲ್ಲ. ಅವು ಪರಸ್ಪರ ಒಂದನ್ನೊಂದು ಅವಲಂಬಿತವಾಗಿರುತ್ತವೆ. ಉದಾಹರಣೆಗೆ, ನಿರು- ದ್ಯೋಗ, ಬಡತನ, ಅಜ್ಞಾನ ಹಾಗೂ ಸಾಂಕ್ರಾಮಿಕ ರೋಗಗಳ ಸಂಬಂಧ ವನ್ನೇ ತೆಗೆದುಕೊಳ್ಳೋಣ. ಸಾಂಕ್ರಾಮಿಕ ರೋಗಗಳ ನಿವಾರಣೆಯಾಗಿ ಅಜ್ಞಾನ, ಬಡತನಗಳು ನಿವಾರಣೆಯಾಗಬೇಕಾಗಿದೆ. ಒಂದು ಮಗು ವಾಂತಿ ಭೇದಿಯಿಂದ ಸಾಯುತ್ತಿದೆಯೆಂದು ತಿಳಿಯೋಣ. ವಾಂತಿಭೇದಿಗೆ ನೀರಿನಲ್ಲಿ ಅಥವಾ ಹಾಲಿನಲ್ಲಿರುವ ರೋಗಾಣುಗಳೇ ಕಾರಣವಾಗಿದ್ದರೂ, ಶುದ್ಧ ನೀರಿನ ಪೂರೈಕೆಯ ಅಭಾವ ಮಗುವಿನಲ್ಲಿ ರೋಗನಿರೋಧಕ ಶಕ್ತಿಯ ಕೊರತೆ,ತಾಯಿ ಯಾದವಳಿಗೆ ಹಾಲನ್ನು ಹೇಗೆ ಶುದ್ಧವಾಗಿಡಬೇಕು ಹಾಗೂ ಮಗುವಿನ ಆದರೋಪಚಾರ ಹೇಗೆ ಮಾಡಿಸಬೇಕು ಎಂಬ ವಿಷಯ ತಿಳಿಯದೇ ಇರುವುದು. ಇವೆಲ್ಲ ಪೂರಕ ಕಾರಣಗಳಾಗಿರುತ್ತವೆ. ಆದುದರಿಂದ ಸಾಂಕ್ರಾಮಿಕ ರೋಗಗಳ ಮೇಲೆ ನಮ್ಮ ಪ್ರಯತ್ನ ತೀವ್ರಗತಿಯಿಂದ ಸಾಗಬೇಕು ಆಗಲೇ ಪ್ರಗತಿ ಸಾಧ್ಯ ವಾಗುತ್ತದೆ.



# ಆಕರ ಗ್ರಂಥಗಳು

1) ಕಾಲರಾ— ಡಾ. ಕರವೀರ ಪ್ರಭು ಕ್ಯಾಲಕೊಂಡ
2) ಕಾಲರಾ— ಡಾ. ಪಿ. ಎಸ್. ಶಂಕರ
3) ಕಾಲರಾ— ಶ್ರೀರವಿ
4) ಸಾಂಸರ್ಗಿಕ ರೋಗಗಳು — ಡಾ. ಪಿ. ಎಸ್. ಬಣಕಾರ
5) ಅಂಟು ರೋಗಗಳು— ಎಚ್. ಎಸ್. ರಾಜು

# "ಕಾಲರಾ"

## (ಹೆಚ್ಚಿನ ವಿಷಯಗಳು)

## ಕಾಲರಾ ರೋಗದ ಕಾರಣಗಳು

ಕಾಲರಾ ರೋಗಕ್ಕೆ ಮಾರಿಬೇನೆ ಎಂತಲೂ ಕರೆಯುತ್ತಾರೆ. ಇದೊಂದು ಸಾಂಕ್ರಾಮಿಕ ರೋಗವಾಗಿರುತ್ತದೆ. ಜಾತ್ರೆ, ಉರುಸು ಮುಂತಾದ ಕಾರಣ ಗಳಿಂದ ಜನರು ಒಂದೆಡೆ ಸೇರುತ್ತಾರೆ. ಹೀಗಾಗಿ ಕಾಲರಾ ಇಂತಹ ಪ್ರಸಂಗಗಳಲ್ಲಿ ಕಾಣಿಸಿಕೊಳ್ಳುವುದು ಸಹಜವಾಗಿರುತ್ತದೆ. ಬೇರೆ ಕಡೆಗಳಿಂದ ಒಬ್ಬ ಕಾಲರಾ ಬಂದ ರೋಗಿ ಈ ಜಾತ್ರೆ, ಉತ್ಸವಗಳಲ್ಲಿ ಬಂದು ಸೇರಿದ ರಾಯಿತು. ಜಾತ್ರೆಯಿಂದ ಬೇರೆ ಬೇರೆ ಊರುಗಳಿಗೆ ಹಿಂದುರಿಗಿದ ಜನರಿಗೆ ಕಾಲರಾ ಬರುತ್ತದೆ. ಅವರು ಹೀಗೆಂದೇ ಇತರರಿಗೆ, ಪಸರಿಸುತ್ತಾ ಹೋಗು ತ್ತದೆ. ನೀರಿನ ಕೊರತೆ, ಸ್ವೈರ್ಮಲ್ಯದ ಅಭಾವ, ದೂಷಿತ ನೀರು, ಆಹಾರ ಮುಂತಾದವುಗಳು ಬಹಳ ಮಟ್ಟಿಗೆ ಕಾರಣವಾಗುತ್ತವೆ.

ಕಾಲರಾ ಗಂಡಾಂತರಕಾರಿಯಾಗಿರುತ್ತದೆ. ರೋಗಿ ಕೆಲವೇ ಗಂಟೆ ಗಳಲ್ಲಿ ಸಾಯಬಹುದಾಗಿದೆ. ವಾಂತಿ, ಭೇದಿಗಳಿಂದ ಅಸಂಖ್ಯಾತ ರೋಗಾಣು ಗಳು ಹೊರಬೀಳುತ್ತವೆ. ನೀರು, ಆಹಾರ, ಹಾಲು, ತರಕಾರಿಗಳ ಮೂಲಕ ಆಹಾರ ನಾಳದಲ್ಲಿ ಸೇರಿ ಅಲ್ಲಿ ತ್ವರಿತಗತಿಯಿಂದ ಬೆಳೆಯುತ್ತವೆ. ನದಿ, ಕೆರೆ ಕುಂಟೆಗಳಲ್ಲಿ ರೋಗಿಯ ಪಾತ್ರೆ ತೊಳೆಯುತ್ತಾರೆ. ಬಟ್ಟೆಗಳನ್ನು ಒಗೆಯು ತ್ತಾರೆ. ರೋಗಾಣುಗಳು ಹರಿದು ಇತರ ಊರುಗಳಿಗೆ ಸಾಗಿ ಬರುತ್ತವೆ.

## ಕಾಲರಾ ಪ್ರಸಾರ

ರೋಗ ಬಂದವನಷ್ಟೆ ಅನುಭವಿಸುವ ರೋಗ ಕಾಲರಾ ಆಗಿರುವುದಿಲ್ಲ. ಆರೋಗ್ಯವಂತರಿಗೂ ರೋಗ ತಗಲುತ್ತದೆ. ನೊಣಗಳಿಂದ ಆಹಾರ ಕಲುಷಿತ ಗೊಂಡು ದೇಹ ಸೇರಿ ಕಾಯಿಲೆ ಬರುತ್ತದೆ. ರೋಗರಹಿತ ನೀರನ್ನು ಗೌಳಿಗರು ಹಾಲಿನಲ್ಲಿ ಬೆರೆಸುತ್ತಾರೆ. ಈ ಹಾಲನ್ನು ಕುಡಿದರೆ ರೋಗ ಖಚಿತವಾಗಿ ಬರುತ್ತದೆ. ತರಕಾರಿಗಳನ್ನು ಈ ನೀರಿನಿಂದ ತೊಳೆದಿರುತ್ತಾರೆ. ಈ ತರಕಾರಿ ಸೇವನೆಯಿಂದ ಕಾಲರಾ ಪ್ರಸಾರವಾಗುತ್ತದೆ. ದೂಷಿತ ನೀರನ್ನು ಕುಡಿಯಲು ಆ ನೀರಿನೊಡನೆ ಕಾಲರಾ ಜಂತುಗಳು ಅವರ ಕರುಳಿಗೆ ಹೋಗಿ ಸೇರು ತ್ತವೆ, ಈ ಪ್ರಕಾರ ಜನರು ರೋಗ ಜಂತುಗಳನ್ನು ಸಂಗಡ ತೆಗೆದುಕೊಂಡು ತಮ್ಮ ಊರುಗಳನ್ನು ಸೇರುತ್ತಾರೆ, ಅಲ್ಲಿ ರೋಗ ಪ್ರಸಾರ ಮಾಡುತ್ತಾರೆ.

## ಕಾಲರಾದ ಲಕ್ಷಣಗಳು

ರೋಗಾಣುಗಳು ನೀರು, ಆಹಾರ, ಹಾಲು; ತರಕಾರಿಗಳ ಮುಖಾಂತರ ಶರೀರವನ್ನು ಸೇರುತ್ತವೆ. ಅಕ್ಕಿಯ ಗಂಜಿಯಂತೆ ಭೇಧಿ ಪ್ರಾರಂಭವಾಗುತ್ತದೆ. ಪದೇ ಪದೇ ವಾಂತಿಯಾಗುತ್ತದೆ. ಕಾಲುಗಳು ಒರಟು ಹಿಡಿಯುತ್ತವೆ. ಮೈ ತಣ್ಣಗಾಗುತ್ತದೆ. ಮೂತ್ರ ಕಟ್ಟಾಗುತ್ತದೆ. 1-2 ದಿನ ಹೀಗೆ ಆಗಿ ಉಪಚಾರವಿರದಿದ್ದರೆ ರೋಗಿ ಸಾಯುತ್ತಾನೆ.

## ಉಪಚಾರಗಳು

ಈ ಮೇಲಿನ ಲಕ್ಷಣಗಳು ಕಂಡು ಬಂದರೆ. ಕಾಲರಾ ರೋಗವೆಂದೇ ತಿಳಿಯಬೇಕು. ಕೂಡಲೇ ವೈದ್ಯರನ್ನು ಭೇಟಿಯಾಗಿ ಉಪಚಾರ ಹೊಂದ

ಬೇಕು. ಜೊತೆಗೆ ಭ್ರಾಂಡಿ, ಶುಂಠಿ ಕಷಾಯ, ಟೀ, ಕಾಫಿ ಮುಂತಾದ ಉತ್ತೇಜಕ ಪೇಯಗಳನ್ನು ಕೊಟ್ಟು, ರೋಗಿಯ ಕೈಕಾಲುಗಳನ್ನು ಹಾಗೂ ಹೊಟ್ಟೆಯನ್ನು ಬಿಸಿ ನೀರಿನ ಚೀಲದಿಂದ ಕಾಯಿಸಿ ಬೆಚ್ಚಗೆ ಇಡಬೇಕು. ಕಾಲರಾ ಜಂತುಗಳು ಬಿಸಿನೀರಿನ ಚೀಲದಿಂದ ಕಾಯಿಸಿ ಬೆಚ್ಚಗಿಡಬೇಕು. ಕಾಲರಾ ಜಂತುಗಳು ಹುಳಿ ವಸ್ತುಗಳಲ್ಲಿ ಬೆಳೆಯುವುದಿಲ್ಲವಾದ್ದರಿಂದ ರೋಗಿಗಳಿಗೆ ನಿಂಬೆರಸ, ಮಜ್ಜಿಗೆ ಮುಂತಾದವುಗಳನ್ನು ಸ್ವಲ್ಪ ಸ್ವಲ್ಪ ಕೊಡುತ್ತಿರಬೇಕು. ಅಕ್ಕಿ ಗಂಜಿ, ಐಸು, ಹಾಲನ್ನು ಕೊಡಬೇಕು.

## ಮುಂಜಾಗ್ರತಾ ಕ್ರಮಗಳು

ಕಾಲರಾ ರೋಗ ಪ್ರಸಾರವಾಗುವುದಕ್ಕೆ ಮುಂಚೆ ಈ ಕ್ರಮಗಳನ್ನು ತೆಗೆದುಕೊಳ್ಳಬೇಕು. ತಮ್ಮ ಮನೆಯ ಪರಿಸರವನ್ನು ಶುಚಿಯಾಗಿಡಬೇಕು. ನೀರಿನ ಮೂಲಕ ರೋಗಾಣುಗಳು ಹರಡುವುದರಿಂದ ನೀರಿನ ಸ್ವಚ್ಛತೆಯ ಬಗ್ಗೆ ಕಾಳಜಿವಹಿಸಬೇಕು. ನೀರಿಗೆ ಪೊಟ್ಯಾಸಿಯಂ ಪರಮ್ಯಾಂಗನೇಟ್ ಸೇರಿಸಬೇಕು. ನಂತರ ಈ ನೀರನ್ನು ಕುದಿಸಿ ಉಪಯೋಗಿಸಬೇಕು. ಅದರಂತೆ ಸೇವಿಸುವ ಆಹಾರವೂ ಶುಚಿಯಾಗಿರಬೇಕು. ಕೊಳೆತ ತರಕಾರಿ, ಹಣ್ಣು ಹಂಪಲಗಳನ್ನು ತಿನ್ನಬಾರದು, ಹಳಸಿದ ತಂಗಳನ್ನ ಉಣ್ಣಬಾರದು, ಪರಿಸರವನ್ನೆಲ್ಲಾ ಸ್ವಚ್ಛವಾಗಿ ಇಟ್ಟುಕೊಳ್ಳಬೇಕು, ಅಂದಾಗ ಮಾತ್ರ ಕಾಲರಾ ರೋಗದ ಬಾಧೆ ತಟ್ಟುವುದಿಲ್ಲ.

## ರೋಗ ಹಬ್ಬಿದ ನಂತರ ತೆಗೆದುಕೊಳ್ಳಬೇಕಾದ ಪ್ರತಿಬಂಧಕ ಕ್ರಮಗಳು

ಯಾವಾಗಲೂ ಬಿಸಿಯಾದ ಅಡುಗೆಯನ್ನೇ ತಿನ್ನಬೇಕು. ಇಟ್ಟ ಅಡುಗೆಯಲ್ಲಿ ರೋಗಾಣುಗಳು ಇರಬಹುದು. ರಸ್ತೆಯಲ್ಲಿ ಮಾರುವ ತಿಂಡಿಗಳನ್ನು

ಎಂದೂ ಸೇವಿಸಬೇಡಿ, ಹಾಲು, ನೀರನ್ನು ಕುದಿರಿ ಆರಿಸಿ ಉಪಯೋಗಿಸ ತಕ್ಕದ್ದು, ಕಾಲರಾ ಹರಡುತಿದ್ದಂತೆಯೇ ಕಾಲರಾ ಪ್ರತಿಬಂಧಕ ಲಸಿಕೆಯನ್ನು ಚುಚ್ಚಿಸಿಕೊಳ್ಳಬೇಕು. ಬಿಲಿ ವ್ಯಾಕ್ಸೀನ್ ಮಾತ್ರೆಗಳನ್ನು ನುಂಗಬೇಕು. ಅಂದರೆ ರಕ್ತದಲ್ಲಿರುವ ರೋಗಾಣುಗಳು ನಾಶವಾಗುತ್ತವೆ.

ರೋಗಿಯ ಮಲ, ಮೂತ್ರ, ವಾಂತಿಗಳನ್ನು ಹಾಗೆಯೇ ಎರಚ ಬಾರದು, ಇವುಗಳಲ್ಲಿ ಕಾಲರಾ ರೋಗಾಣುಗಳಿರುತ್ತವೆ. ಔಷಧಿ ಸಿಂಪಡಿಸಿ ಬೂದಿಯಲ್ಲಿ ಮುಚ್ಚಬೇಕು. ಕಾರ್ಬಾಲಕ್ ಲೋಶನ್ ಹಾಕುವುದರಿಂದ ರೋಗಾಣುಗಳು ನಾಶಹೊಂದುವವು. ಇದನ್ನು ನೆಲದೊಳಗೆ ಹುಗಿಯಬೇಕು ರೋಗಿಯ ಬಟ್ಟೆ ಬರೆಗಳನ್ನು ನದಿ ಕೆರೆ, ಬಾವಿಗಳಲ್ಲಿ ಒಗೆಯಬಾರದು ಕಾಲರಾ ಇದ್ದ ಸಮಯದಲ್ಲಿ ರೇಜಕವನ್ನು ತೆಗೆದುಕೊಳ್ಳಬಾರದು. ರೋಗಿಯ ಆರೈಕೆ ಮಾಡುವವರೂ ಕೂಡಾ ತಮ್ಮ ಕೈಗಳನ್ನು ಸ್ವಚ್ಛವಾಗಿ ತೊಳೆದು ಕೊಳ್ಳಬೇಕು. ರೋಗಿ ಉಪಯೋಗಿಸಿದ ಬಟ್ಟೆ ಬರೆಗಳನ್ನು ನೀರಲ್ಲಿ ಕುದಿಸಿ ಉಪಯೋಗಿಸಬೇಕು ನೊಣಗಳ ನಾಶ ಮೊದಲ ಕರ್ತವ್ಯವಾಗಿರುತ್ತದೆ. ಕುಡಿಯುವ ಹಾಗೂ ಬಳಸುವ ನೀರಿಗೆ ಪೊಟ್ಯಾಸಿಯಂ ಪರಮ್ಯಾಂಗನೇಟ್ ಅಥವಾ ಕ್ಲೋರಿನ್ ಹಾಕಿ ಶುಚಿಗೊಳಿಸಬೇಕು. ಕ್ರಿಮಿ ರಹಿತವಾಗಿ ಮಾಡ ಬೇಕು. ಎಲ್ಲದಕ್ಕೂ ವೈದ್ಯರ ಸಹಕಾರ, ಸಲಹೆ ಅತ್ಯಗತ್ಯವಾಗಿರುತ್ತದೆ. ರೋಗವನ್ನು ನೀವೆ ನಿರ್ಧರಿಸಿ ನಿಮಗೆ ತಿಳಿದಂತೆ ಔಷಧೋಪಚಾರ ಮಾಡಿಸ ಬಾರದು. ಹೆಚ್ಚು ಕಡಿಮೆ ಆದಲ್ಲಿ ವೈದ್ಯರನ್ನೇ ಕಂಡು ಸಲಹೆ ಪಡೆಯಬೇಕು.

## ದಡಾರ

---

ದಡಾರವು ವೈರಸ್ ಎಂಬ ಅತ್ಯಂತ ಸೂಕ್ಷ್ಮಾಣು ಜೀವಿಗಳಿಂದ ಹರ ಡುವ ರೋಗವಾಗಿರುತ್ತದೆ. ಈ ರೋಗಾಣುಗಳು ಮೂಗಿನಲ್ಲಿಯ ಸಿಂಬಳದಲ್ಲಿ

ಹಾಗೂ ಶ್ವಾಸನಾಳದ ಪರೆಗಳಲ್ಲಿಯೂ ವಿಪುಲವಾಗಿರುತ್ತವೆ. ರೋಗಿಗಳ ಮೈ ಮೇಲೆ ಬಕ್ಕೆಗಳು ಕಾಣುವ ಮೊದಲೇ ರೋಗಿಗಳಿಂದ ಈ ಕಾಯಿಲೆ ಹರಡುತ್ತದೆ. ಆದುದರಿಂದ ರೋಗಿಯು ಮೈಮೇಲಿನ ಹಕ್ಕಳಿ ಉದುರುವವರೆಗೂ ಮತ್ತು ಅವನ ಸಂಪರ್ಕದಲ್ಲಿರುವ ಇತರರನ್ನೂ ಕನಿಷ್ಟ ಎರಡು ವಾರಗಳ ಕಾಲ ಪ್ರತ್ಯೇಕವಾಗಿಟ್ಟಿರಬೇಕು. ರೋಗಿ ಉಪಯೋಗಿಸಿದ ಬಟ್ಟೆ ಬರೆಗಳನ್ನು ಶುದ್ಧೀಕರಣ ಮಾಡಬೇಕು.

ದಡಾರ ರೋಗ ಸಾಮಾನ್ಯವಾಗಿ ಮಳೆಗಾಲದ ಕೊನೆಯಲ್ಲಿ ಅಥವಾ ವಸಂತ ಕಾಲದ ಪ್ರಾರಂಭದಲ್ಲಿ ಬರುತ್ತದೆ. ರೋಗಾಣುಗಳು ರೋಗಿಯು ಎಂಜಲು ಅಥವಾ ಉಗುಳಿನ ಹನಿಗಳ ಮೂಲಕ, ಸೀನಿದಾಗ ಹೊರ ಬರುವ ತುಂತುರುಗಳ ಮೂಲಕ ಗಾಳಿಯಲ್ಲಿ ಪ್ರಸಾರಗೊಳ್ಳುತ್ತವೆ. ಒಂದು ವಿಶೇಷವೆಂದರೆ ಒಮ್ಮೆ ಈ ರೋಗ ಬಂದು ಹೋದರೆ ಪುನಃ ಈ ರೋಗ ಸಾಮಾನ್ಯವಾಗಿ ಅವನಲ್ಲಿ ಕಾಣಿಸಿಕೊಳ್ಳುವುದಿಲ್ಲ.

ಈ ರೋಗದ ಲಕ್ಷಣಗಳೆಂದರೆ ನೆಗಡಿ, ಕೆಮ್ಮು, ಜ್ವರ,ಗಂಟಲು ನೋವು, ಕಣ್ಣು ಕೆಂಪಾಗುವುದು ಮುಂತಾದವುಗಳಾಗಿರುತ್ತವೆ. ನಂತರ 2–3 ದಿನಗಳಲ್ಲಿ ಮೈಮೇಲೆ ಬಕ್ಕೆಗಳು ಆಗುತ್ತವೆ. ಒಳಬಾಯಿ ಕೆಂಪೇರಿ ಚುಕ್ಕೆಗಳು ಕಾಣಿಸಿಕೊಳ್ಳುತ್ತವೆ. ಸಣ್ಣ ಮಕ್ಕಳಲ್ಲಿ ಸೆಳೆತ ಬಂದು ಶ್ವಾಸಕೋಶಗಳಿಗೆ ತೊಂದರೆಯಾಗುತ್ತದೆ. ತೀವ್ರ ಸ್ವರೂಪ ಜ್ವರ ಎರುತ್ತದೆ. ಬಕ್ಕೆಗಳು ಕಾಲು, ಪಾದಗಳವರೆಗೆ ಬಂದ ನಂತರ ನೆಗಡಿ, ಕೆಮ್ಮು ಜ್ವರ ಮುಂತಾದವುಗಳು ಗುಣವಾಗುತ್ತವೆ. ಈ ಬಕ್ಕೆಗಳು ತಲೆಯ ಮೇಲೆ ಕೂದಲಿನ ಬುಡದ ಸುತ್ತ ಕೆನ್ನೆಗಳ ಹಿಂದೆ ಹೆಚ್ಚಾಗಿ ಕಾಣಿಸಿಕೊಳ್ಳುತ್ತವೆ. ಬೊಕ್ಕೆಗಳಿಂದ ರಕ್ತಸ್ರಾವವಾಗುತ್ತದೆ. ಮೈ ಕಡಿತ ಕಡಿಮೆಯಾದ ಮೇಲೆ ಬಕ್ಕೆಗಳು ತಾವಾಗಿಯೇ ಮಾಯವಾಗುತ್ತವೆ. ಈ ರೋಗ ಹೆಚ್ಚಾದರೆ ಲಿಂಫ್ ಗ್ರಂಥಿಗಳು ಕತ್ತಿನ ಕೆಳಗೆ ಹಾಗೂ ಹಿಂಭಾಗದಲ್ಲಿ ಉಬ್ಬುತ್ತವೆ. ಭೇದಿ, ವಾಂತಿ, ಕಿವಿ ಸೋರುವುದು, ಭ್ರಾಂಕೊನಿಮೋನಿಯ, ಮುಂತಾದವುಗಳು ಸಣ್ಣ ಮಕ್ಕಳಲ್ಲಿ ಕಾಣಿಸಿಕೊಳ್ಳು

ತ್ತವೆ. ಶ್ವಾಸಕೋಶಗಳ ಉರಿಯೂತ, ಭ್ರಾಂಕೋನಿಮೋನಿಯ ಎಂಬ ರೋಗ, ಸೂಪ್ತ ಕ್ಷಯ ಈ ರೋಗದಿಂದ ಹೊರ ಹೊಮ್ಮುತ್ತವೆ. "ಎನ್‌ಕೆ ಫಲೈಟಸ್" ಎಂಬ ರೋಗಕ್ಕೆ ತಿರುಗುತ್ತದೆ. ಜ್ವರ ಮತ್ತು ತಲೆ ಶೂಲೆ ಪ್ರಾರಂಭವಾಗುತ್ತವೆ. ಜ್ಞಾನ ತಪ್ಪುವ ಸಾಧ್ಯತೆಗಳಿರುತ್ತವೆ. ಸೆಳೆತ, ಪಾರ್ಶ್ವವಾಯು ಮುಂತಾದವುಗಳು ಕಂಡು ಬರುತ್ತವೆ. ರೋಗದ ಲಕ್ಷಣಗಳು ತಲೆದೋರಿದ ಕೂಡಲೇ ಸೂಕ್ತ ವೈದ್ಯರ ಬಳಿ ಹೋಗಿ ಚಿಕಿತ್ಸೆ ಪಡೆಯಬೇಕು.

## ಮುಂಜಾಗ್ರತೆಯ ಕ್ರಮಗಳು

ರೋಗವು ಹೆಚ್ಚಾದಾಗ ಭ್ರಾಂಕೋನಿಮೋನಿಯ ಎಂಬ ರೋಗಕ್ಕೆ ಪರಿವರ್ತನೆಯಾಗುವ ಸಾಧ್ಯತೆಗಳಿರುತ್ತವೆ ಈ ಬಗ್ಗೆ ಎಚ್ಚರ ವಹಿಸಬೇಕು. ಹಾಗಾದಲ್ಲಿ ಕೂಡಲೆ ಚಿಕಿತ್ಸೆ ಪಡೆಯಬೇಕು. ರೋಗಿ ಹಾಗೂ ರೋಗಿಯ ಸಂಪರ್ಕ ಬಂದವರನ್ನು ಒಂದು ವಾರದವರೆಗೆ ಪ್ರತ್ಯೇಕವಾಗಿ ಇಡುವ ವ್ಯವಸ್ಥೆ ಇರಬೇಕು. ಹೀಗೆ ಮಾಡುವುದರಿಂದ ರೋಗಾಣುಗಳ ಗಂಡಾಂತರದಿಂದ ತಪ್ಪಿಸಿದಂತೆ ಆಗುತ್ತದೆ. ರೋಗಿಗೆ ಮೈಮೇಲೆ ಬೊಕ್ಕೆಗಳು ಕಾಣುವ ಮುನ್ನವೇ ಸೋಂಕು ಇತರರಿಗೂ ಪಸರಿಸುತ್ತದೆ. ಹೀಗಾಗಿ ಈ ರೋಗದ ನಿಯಂತ್ರಣವು ತುಸು ಕಷ್ಟದ ಕಾರ್ಯವೇ ಆಗಿರುತ್ತದೆ. "ಗ್ಯಾಮಗ್ಲಾಬುಲಿನ್" ಎಂಬ ಔಷಧಿಯನ್ನು ನಿರ್ದಿಷ್ಟ ಪ್ರಮಾಣದಲ್ಲಿ ಚುಚ್ಚುಮದ್ದಿನ ರೂಪದಲ್ಲಿ ಕೊಟ್ಟು 6 ಅಥವಾ 8 ವಾರಗಳ ವರೆಗೆ ಈ ರೋಗವನ್ನು ತಡೆಯಬಹುದು.

## ರೋಗದ ಚಿಕಿತ್ಸೆ

ರೋಗ ಚಿಕಿತ್ಸೆಯು ರೋಗಿಯ ತೂಕದ ಪ್ರಮಾಣದ ಮೇಲೆ ಇರುತ್ತದೆ. ಹೆಚ್ಚಿನ ಪ್ರಮಾಣದ ಗ್ಯಾಮಗ್ಲಾ ಬುಲಿನ್ ಔಷಧಿಯನ್ನೇ ಕೊಡುತ್ತಾರೆ.

ರೋಗಿಯ ಪ್ರತಿ ಪೌಂಡ್ ದೇಹದ ತೂಕಕ್ಕೆ 0.2–0.4 ಘ. ಸೆಂ. ವರೆಗೆ ಇಂಜೆಕ್ಷನ್ ರೂಪದಲ್ಲಿ ಕೊಡುತ್ತಾರೆ ಎನ್‌ಕೆಫಾಲೈಟಿಸ್ ಉಂಟಾದರೆಪ್ರತಿಪೌಂ. ತೂಕಕ್ಕೆ 0.4–1.0 ಘ. ಸೆಂ. ಗ್ಯಾಮಗ್ಲಾ ಬುಲಿನ್ ಕೊಡಬೇಕಾಗುತ್ತದೆ ಕಾರ್ಟಿಸೋನ್ ಕೂಡಾ ಕೊಡುತ್ತಾರೆ. ಜ್ವರವನ್ನು ಇಳಿಸಿ ಕೆಮ್ಮನ್ನು ಕಡಿಮೆ ಮಾಡಬೇಕು. ಮಕ್ಕಳಲ್ಲಿಯು ದಡಾರಕ್ಕೆ ಜೊತೆಗೆ ನಿದ್ರೆ ಹಾಗೂ ಸಾಕಷ್ಟು ವಿಶ್ರಾಂತಿ ಅಗತ್ಯವಾಗಿರುತ್ತದೆ. ಪ್ರಕಾಶ ಮಾನವಾದ ಬೆಳಕು ಕಣ್ಣಿಗೆ ಬೀಳ ಬಾರದು. ಪೊಟ್ಯಾಸಿಯಂ ಪರ ಮ್ಯಾಂಗನೇಟ ಸ್ನಾನದ ನೀರಿನಲ್ಲಿ ಹಾಕಿ ಸ್ನಾನ ಮಾಡಬೇಕು. ಮಲಗುವ ಕೊಠಡಿ ಬೆಚ್ಚಗಿರಬೇಕು. ದ್ರವ ರೂಪದ ಆಹಾರವನ್ನು ಕೊಡಬೇಕು. ಒಂದು ವೇಳೆ ಕಿವಿ ಸೋರುತ್ತಿದ್ದರೆ ವೈದ್ಯರಿಗೆ ತೋರಿಸಬೇಕು. ನಿಮೋನಿಯಾ ಕೂಡಾ ಇರದಂತೆ ಬಾರದಂತೆ ನೋಡಬೇಕು. ನಿಮೋನಿಯಾ ತಡೆಯಲು ಪೆನಿಸಿಲಿನ್ ಚುಚ್ಚುಮದ್ದನ್ನು ಉಪಯೋಗಿಸ ಬೇಕು.

## ಸಾಮಾನ್ಯ ನೆಗಡಿ

ಮೂಗಿದ್ದವರಿಗೆಲ್ಲಾ ನೆಗಡಿ ಬರುವುದು ಸರ್ವೇ ಸಾಮಾನ್ಯವಾಗಿರು ತ್ತದೆ. ಹುಟ್ಟಿದ ಮನುಷ್ಯ ನೆಗಡಿ ಬಾರದೇ ಇರುವುದೇ ಇಲ್ಲ. ಎಷ್ಟೆ ನೆಗಡಿ ಬಾರದಂತೆ ಜಪ್ಪಿಸಿಕೊಂಡರೂ ನೆಗಡಿ ಬಂದೇ ಬರುತ್ತದೆ. ಹವೆ ಬದಲಾದರೆ, ಪ್ರವಾಸ ಹೋದರೆ, ನೀರು ಬದಲಾದರೆ, ಆಯಾಸವಾದರೆ, ಅಸಕ್ತನಿದ್ದರೆ, ಥಂಡಿ ಹವಾಮಾನವಿದ್ದರೆ, ಆಹಾರದಲ್ಲಿ ಬದಲಾವಣೆ ಕಂಡರೆ ನೆಗಡಿ ವ್ಯಕ್ತಿಗೆ ಬರುತ್ತದೆ. ಚಿಕ್ಕ ಮಕ್ಕಳಿಂದ ಹಿಡಿದು ಸಾಯುವ ಮುದುಕರ ವರೆಗೆ ಈ ರೋಗ ಬಾಧಿಸುತ್ತದೆ. ನೆಗಡಿಯೂ ಹವೆಯ ಮೂಲಕ ಒಂದು ಬಗೆಯ ವೈರಸ್ ಜಂತುಗಳಿಂದ ಉಂಟಾಗುತ್ತದೆ. ಕೆಲವೊಂದು ಸಾರೆ ನೆಗಡಿಯ ಜಂತುಗಳು ಮನುಷ್ಯನ ದೇಹದಲ್ಲಿ ದೀರ್ಘಕಾಲ ಉಳಿದುಕೊಳ್ಳುತ್ತವೆ. ತಂಪು ತಂಪಾದ ಅಥವಾ ತೇವವಿರುವ ಸ್ಥಳಗಳಲ್ಲಿ ವಾಸ, ತಂಡನೆಯ ಗಾಳಿ ತಾಕು

ವುದು, ನೀರಿನಲ್ಲಿ ಹೆಚ್ಚು ಕಾಲ ಕೆಲಸ ಮಾಡುವುದು ನೆಗಡಿಯ ಆಗಮಿಕಗಳ ಕಾರಣವಾಗಿರುತ್ತದೆ. ಎಲ್ಲಕ್ಕೂ ಮಿಗಿಲಾಗಿ ನೀವು ಯಾರಾದರೂ ನೆಗಡಿಯಾದವರ ಸಂಪರ್ಕಕ್ಕೆ ಸ್ವಲ್ಪಕಾಲ ಬಂದರೂ ಸಾಕು ನೆಗಡಿ ನಿಮಗೂ ಬಂದು ಬಿಡುತ್ತದೆ. ಕುಟುಂಬದ ಒಬ್ಬ ಸದಸ್ಯರಿಗೆ ಬಂದರೆ ಸಾಕು, ಎಲ್ಲರೂ ನೆಗಡಿಯ ಬಾಧೆಯಿಂದ ಬಳಲಬೇಕಾಗುತ್ತದೆ. ನೆಗಡಿ ಬರುವುದರಿಂದ ವ್ಯಕ್ತಿಗೆ ಆಯಾಸ, ಬಳಲಿಕೆ ಉಂಟಾಗುತ್ತದೆ. ಮೈ, ಕೈ ನೋವು, ತಲೆ ಶೂಲೆ, ಜ್ವರವು ಬರುತ್ತದೆ. ಮೂಗಿನಲ್ಲಿ ಒಂದೇ ಸವನೆ ನೀರು ಸುರಿಯುತ್ತದೆ. ಕರ ವಸ್ತ್ರದಿಂದ ಸದಾ ಮೂಗನ್ನು ಒರಸಿಕೊಳ್ಳುತ್ತಲೇ ಇರಬೇಕಾಗುತ್ತದೆ. ಮೂಗು ಕೆಂಪಾಗಿ ಉರಿಯಲು ಪ್ರಾರಂಭವಾಗುತ್ತದೆ. ಕಣ್ಣುಗಳು ಕೆಂಪಾಗುತ್ತವೆ. ಊಟ ರುಚಿಸುವುದಿಲ್ಲ. ಯಾವ ಕೆಲಸವನ್ನು ಮಾಡಲು ಮನಸ್ಸಾಗುವುದಿಲ್ಲ. ವ್ಯಕ್ತಿಯಲ್ಲಿ ರೋಗ ಪ್ರತಿ ಬಂಧಕ ಶಕ್ತಿ ಕಡಿಮೆ ಆಗುತ್ತದೆ. ವೈರಸ್‌ಗಳ ಸಂಖ್ಯೆ ಹೆಚ್ಚಿ ನೆಗಡಿ ತೀವ್ರ ಸ್ವರೂಪ ತಾಳುತ್ತದೆ. ಸಿಂಬಳ ಬರುತ್ತದೆ. ನೆಗಡಿ ಬಂದವರ ಸಂಪರ್ಕಕ್ಕೆ ಇತರರು ಬಂದರೆ ಅಥವಾ ಇವನ ಕೈ ವಸ್ತ್ರವನ್ನು ಮತ್ತೊಬ್ಬರು ಉಪಯೋಗಿಸಿದರೆ ಅವರಿಗೂ ನೆಗಡಿ ಅಂಟಿಕೊಂಡೇ ಬಿಡುತ್ತದೆ. ಕರವಸ್ತ್ರವನ್ನು ನೀರಲ್ಲಿ ಕುದಿಸಿ ಉಪಯೋಗಿಸಬೇಕು. ಬಟ್ಟೆ ಬರೆಗಳನ್ನು ಬಿಸಿಲಿನಲ್ಲಿ ಕಾಯಿಸಬೇಕು. ನೆಗಡಿಯಿಂದ ಶ್ವಾಸನಾಳಕ್ಕೆ ಬಾವು ಬರುತ್ತದೆ. ಮುಂದೆ ನೆಗಡಿಯಿಂದ ಕೆಮ್ಮು ಪ್ರಾರಂಭವಾಗುತ್ತದೆ. ಕೆಮ್ಮುವಾಗ ಬಾಯಿಗೆ ಕರ ವಸ್ತ್ರ ಹಿಡಿಯಬೇಕು. ಒಂದು ವಾರದ ವರೆಗಂತೂ ನೆಗಡಿ ಔಷಧಿ ಸೇವಿಸಿದರೂ ಸರಿಯುವುದೇ ಇಲ್ಲ. ತೃಪ್ತಿಗೋಸ್ಕರ ಔಷಧಿಗಳನ್ನು ಸೇವಿಸಬೇಕಷ್ಟೆ ನೀಲಗಿರಿ ಎಣ್ಣೆಯ ಹನಿಗಳನ್ನು ಅಥವಾ ಅಮೋನಿಯ ದ್ರವದ ಹನಿಗಳನ್ನು ಕರ ವಸ್ತ್ರದ ಮೇಲೆ ಹಾಕಿ ಮೂಸುವುದರಿಂದ ನೆಗಡಿ ಶಮನವಾಗಬಹುದಾಗಿದೆ. ಜೊತೆಗೆ ಸ್ವಲ್ಪ ಹಿತವೆನ್ನಿಸುತ್ತದೆ. ಮಾರುಕಟ್ಟೆಗಳಲ್ಲಿ ವಿಕ್ಸ್, ವಿಕ್ಸ್ ಇನ್ ಹೇಲರ್ ಮುಂತಾದವುಗಳು ಹೇರಳವಾಗಿ ದೊರೆಯುತ್ತವೆ. ನೆಗಡಿಯನ್ನು ಶಮನ ಮಾಡುವ ಮಾತ್ರೆಗಳೂ ದೊರೆಯುತ್ತವೆ. ಔಷದೋಪಚಾರಗಳಿಲ್ಲದೆಯೂ ಕೆಲವು ಸಲ, ಕೆಲವರಲ್ಲಿ ಸಾಮಾನ್ಯ ನೆಗಡಿ 4–8 ದಿನಗಳಲ್ಲಿ ಸರಿದು ಹೋಗುತ್ತದೆ. ನೆಗಡಿಯ ಜೊತೆಗೆ ಇರುವ ಕನ್ನೂರಿ, ಜ್ವರ, ಬಾಯಿ ರುಚಿ ಇರದಿರುವುದು ಕೂಡ ನೆಗಡಿ ಸೋತ ನಂತರ ಎಲ್ಲವೂ ಸರಿ ಹೋಗುತ್ತವೆ. ಆದಷ್ಟು

ನೆಗಡಿ ಬಂದವರ ಸಂಗವನ್ನು 7–8 ದಿನವಾದರೂ ಬಿಡಬೇಕು. ನೆಗಡಿ ಸರಿಯು ದಿದ್ದರೆ ವೈದ್ಯರನ್ನು ಕಾಣಬೇಕು. ನೆಗಡಿ ಸರಿಯದ ಕಾರಣಗಳನ್ನು ಹುಡಕ ಬೇಕಾಗುತ್ತದೆ.

## ನಾಯಿ ಕೆಮ್ಮು

ನಾಯಿ ಕೆಮ್ಮಿಗೆ ಮತ್ತೊಂದು ಹೆಸರು ಕೋಡುಗೆಮ್ಮು ಎಂದು. "ಹಿಮೊಫಿಲಿಸ್ ಪಟ್ಯುಸಸ್" ಎಂಬ ರೋಗಾಣುವಿನಿಂದ ಈ ಕಾಯಿಲೆ ಬರು ತ್ತದೆ. ಮಕ್ಕಳು ಉಸಿರುಗಟ್ಟುವಂತೆ ಕೆಮ್ಮುತ್ತಾರೆ. ಕೊನೆಗೆ ದೀರ್ಘವಾದ ಉಸಿರನ್ನು ತೆಗೆದುಕೊಳ್ಳುತ್ತವೆ. ಕೆಲವೊಂದು ಸಾರಿ ಮಕ್ಕಳು ಕೆಮ್ಮುತ್ತಲೇ ವಾಂತಿಯನ್ನು ಮಾಡಿಕೊಳ್ಳುತ್ತವೆ. ಹೆಚ್ಚಾಗಿ ಚಿಕ್ಕ ಮಕ್ಕಳಲ್ಲಿಯೇ ಈ ರೋಗ ಕಾಣಿಸುತ್ತದೆ. ಹೆಣ್ಣು ಮಕ್ಕಳಿಗೆ 10–12 ವರ್ಷದೊಳಗೆ ಬರು ವುದು. ಸಾಮಾನ್ಯವಾಗಿ ಈ ರೋಗ ಜನೆವರಿಯಿಂದ ಮೇ ತಿಂಗಳಲ್ಲಿ ಬರು ತ್ತದೆ. ಮಕ್ಕಳಲ್ಲಿ ಈ ರೋಗ ತೀವ್ರಗೊಂಡದ್ದಾದರೆ ಮೂಗು ಮತ್ತು ಕಣ್ಣು ಗಳಲ್ಲಿ ರಕ್ತ ಸುರಿಯುತ್ತದೆ. ರೋಗಾಣುಗಳು ಹೆಚ್ಚಾಗಿ ಗಂಟಲಿನಲ್ಲಿ ನೆಲಸಿ ರುತ್ತವೆ.

## ರೋಗದಿಂದಾಗುವ ದುಷ್ಪರಿಣಾಮಗಳು

ಈ ರೋಗದಿಂದ ಭಯಂಕರ ರೋಗಗಳು ಕಾಣಿಸಿಕೊಳ್ಳುವ ಸಾಧ್ಯತೆ ಗಳಿರುತ್ತವೆ. ಉದಾಹರಣೆಗೆ ಶ್ವಾಸನಾಳದ ಊರಿಯೂತ ಗೊರಲು ನಿಮೋ ನಿಯ, ಕಿವಿ ಸೋರುವುದು, ಶ್ವಾಸಕೋಶದ ಕೆಲ ಭಾಗ, ಕುಸಿಯುವುದು ಇಲ್ಲವೆ ದೊಡ್ಡದಾಗುವುದು, ಪ್ಲೂರದೊಳಗೆ ಗಾಯಗಳಾಗಲೀ ಇಲ್ಲವೇ ಕೀವಾ ಗಲೀ ಸೇರಿಕೊಳ್ಳುವುದು, ಶ್ವಾಸನಳಿಕೆಗಳು ಹಿಗ್ಗುವುದು, ಕ್ಷಯರೋಗವಿದ್ದರೆ

ಅದು ಪುಟ್ಟದೆದ್ದು ಎಳುವುದು ಮುಂತಾದವುಗಳಾಗಿರುತ್ತವೆ. ಹೃದಯ ದುರ್ಬಲವಾಗಬಹುದು. ಆದರಲ್ಲಿಯು ಬಲಹೃತ್ಕುಕ್ಷಿ ದೊಡ್ಡದಾಗುತ್ತದೆ. ವಾಂತಿ ಹೆಚ್ಚಾಗುತ್ತದೆ. ಆಹಾರ ಸೇವನೆ ಕಡಿಮೆ ಆಗುತ್ತದೆ. ಮಕ್ಕಳು ಸೊರಗುತ್ತವೆ. ಗುದನಾಳ ಕುಸಿಯುತ್ತದೆ. ನಾಲಿಗೆಯ ಕೆಳ ಬದಿಯಲ್ಲಿ ಮತ್ತು ಬಾಯಲ್ಲಿ ಚಿಕ್ಕ ಹುಣ್ಣುಗಳಾಗುತ್ತವೆ. ಸೆಳೆತ ಉಂಟಾಗಬಹುದು. ಮೂರ್ಛೆರೋಗ, ಬುದ್ಧಿ ಮಂದವಾಗುವಿಕೆ, ಲಕ್ವ ಹೊಡೆಯುವಿಕೆ, ಪಾರ್ಶ್ವ ವಾಯು ದೃಷ್ಟಿಮಾಂದ್ಯ, ಪಚಾಟ ನಿಲ್ಲುವುದು ಮೆದುಳು ಗಂಡಾಂತರಕ್ಕೀಡಾ ಗುತ್ತದೆ. ಮೂಗಿನಲ್ಲಿ ರಕ್ತ ಸುರಿಯುತ್ತದೆ. ವಾಂತಿಯಲ್ಲಿ ರಕ್ತ ಬೆರೆತಿರು ತ್ತದೆ. ಮೆದುಳಿನಲ್ಲಿಯೂ ರಕ್ತ ಸ್ರಾವವಾಗುತ್ತದೆ.

## ಪ್ರತಿಬಂಧಕ ಕ್ರಮಗಳು

ರೋಗಿಯನ್ನು ಕನಿಷ್ಟ ಎರಡು ವಾರ ದೂರವಿಡಬೇಕು. ಟೆಟ್ರಾ ಮೈಸಿನ್ ಅರಿಯೋ ಮೈಸಿನ್ ಮುಂತಾದ ಆಂಟಿಬಯಾಟಿಕ್ ಔಷಧಗಳನ್ನು ಉಪಯೋಗಿಸಬೇಕು. ಡಿ. ಪಿ. ಟಿ. ಚುಚ್ಚುಮದ್ದುಗಳನ್ನು ಮಗು ಜನನ ವಾದ ಮೇಲೆ 3. 4. 5. ನೇ ತಿಂಗಳಲ್ಲಿ ಕೊಡಿಸಬೇಕು.

## ರೋಗಕ್ಕೆ ಚಿಕಿತ್ಸೆ

ಈ ರೋಗದಲ್ಲಿ ಮಕ್ಕಳಿಗೆ ವಾಂತಿ ಕಾಣಿಸುತ್ತದೆ. ಆಗ ಆಹಾರ ವನ್ನು ಸ್ವಲ್ಪ ಸ್ವಲ್ಪವಾಗಿ ಬಿಟ್ಟು ಬಿಟ್ಟು ಕೊಡಬೇಕು. ಸುತ್ತಲ ವಾತಾ ವರಣ ಉಷ್ಣತೆಯ ವೈಪರೀತ್ಯಗಳ ಬಗ್ಗೆ ಎಚ್ಚರ ವಹಿಸಬೇಕು. ಮಕ್ಕಳನ್ನು ಹೊಟ್ಟೆಯ ಮೇಲೆ ಡಬ್ಬು ಮಲಗಿಸಿ ಗಂಟಲಿನ ತೋಳೆಯನ್ನು ತಗೆಯಬೇಕು ಉಸಿರಾಟದ ತೊಂದರೆಯಿಂದ ನೀಲಿಯಾಗಿದ್ದರೆ ಆಮ್ಲಜನಕವನ್ನು ಪೂರೈಸ

ಬೇಕು. ಸೆಟೆ ಬಂದರೆ ಇಲ್ಲವೆ ನಿದ್ರೆ ಬಾರದಿದ್ದರೆ ಫೀನೋಬಾರ್ಬಟೋನ್ ಎಂಬ ಇಂಜಕ್ಷನ್ ಕೊಡಬೇಕು. ವಿಷಾಘ್ನಗಳನ್ನು ಹೊಂದಿದ ರಕ್ತರಸವನ್ನು ಸೂಕ್ತ ಪ್ರಮಾಣದಲ್ಲಿ ಕೊಡಬೇಕು; ಗ್ಯಾಮಗ್ಲಾಬುಲಿನ್, ಕ್ಲೋರೊ ಮೈಸಿಟಿನ್, ಟೆಟ್ರಾಸೈಕ್ಲಿನ್ ಮುಂತಾದ ಔಷಧಿಗಳನ್ನೂ ಕೊಡುತ್ತಾರೆ.

## ಗಂಟಲು ಬೇನೆ

ಗಂಟಲು ಬೇನೆಗೆ ಡಿಫ್ತೀರಿಯಾ ರೋಗವೆಂತಲೂ ಕರೆಯುತ್ತಾರೆ. ಈ ರೋಗ ಬೆಕ್ಟೀರಿಯಾದಿಂದ ಉಂಟಾಗುತ್ತದೆ. ಮಳೆಗಾಲದಲ್ಲಿ ಬರುವ ರೋಗವಿದು. ಚಿಕ್ಕ ಮಕ್ಕಳಿಗೆ ಹೆಚ್ಚಾಗಿ ಬರುತ್ತದೆ. ರೋಗಾಣುಗಳು ಗಂಟಲು, ಮೂಗು ಹಾಗೂ ಕಂಠನಾಳಗಳಲ್ಲಿ ಬೆಳೆದು ಒಂದು ಅಸಹಜ ಪರೆಯನ್ನು ಉಂಟುಮಾಡುತ್ತವೆ. ಅಲ್ಲಿ ಅವು ಕರಗುವ ಕೆಲವು ವಿಷಾಣು ಗಳನ್ನು ಉಂಟುಮಾಡುತ್ತವೆ. ರೋಗಾಣುಗಳು ಹವೆಯ ಧೂಳಿನ ಕಣ ಗಳಿಂದಲೂ, ಜೊಲ್ಲು, ಸಿಂಬಳ ಗಾಯದಿಂದ ಹೊರಬರುವ ರಕ್ತ, ಕೀವು ಮುಂತಾದವುಗಳಿಂದಲೂ ಒಬ್ಬರಿಂದ ಒಬ್ಬರಿಗೆ ಹರಡುತ್ತದೆ. ಹಾಲಿನಲ್ಲಿ ಹರಡಿದ ರೋಗಾಣು, ಹಾಲನ್ನು ಕುಡಿಯುವುದರಿಂದ ರೋಗ ಹಬ್ಬುತ್ತದೆ. ಬಟ್ಟೆ ಬರೆಗಳಲ್ಲಿ ಟೂತ್‌ಬ್ರಷ್, ಪುಸ್ತಕ ಮುಂತಾದವುಗಳ ಮೂಲಕ ರೋಗಾಣುಗಳ ಪ್ರಸಾರವಾಗುತ್ತದೆ. ಗಂಟಲು ಬೇನೆ ತೀವ್ರ ಸ್ವರೂಪದ್ದಾಗಿ ದ್ದರೆ ತಲೆನೋವು, ಆಲಸ್ಯ, ಜ್ವರ ಬರುತ್ತದೆ. ಗಂಟಲು ಉಬ್ಬಿ ಕೆಂಪಾಗು ತ್ತದೆ. ಕತ್ತಿನಲ್ಲಿರುವ ಗ್ರಂಥಿಗಳೂ ಉಬ್ಬುತ್ತವೆ. ಮಾರನೇಯ ದಿನ ಗಂಟ ಲೊಳಗೆ ಬಿಳಿ ಮಿಶ್ರಿತ ಹಳದಿಯ ಚುಕ್ಕೆಗಳು ಕಾಣಿಸಿಕೊಳ್ಳುತ್ತವೆ. ಇವು ಕಿರುನಾಲಿಗೆ, ಮೆದುಳಿಗೆ ವಿಸ್ತರಿಸುತ್ತವೆ. ಇದರಿಂದ ರಕ್ತವೂ ಸೋರುತ್ತದೆ. ಹೃದಯದ ಬಡಿತ ವೇಗವಾಗುತ್ತದೆ. ರಕ್ತದ ಪ್ರಮಾಣ ಕಡಿಮೆಯಾಗುತ್ತದೆ ನಾಡಿ ಮಿಡಿತ ಕಡಿಮೆಯಾಗುತ್ತದೆ. ದಣಿವು, ಆಹಾರ ಮತ್ತು ಉಗುಳನ್ನು ನುಂಗುವುದಕ್ಕೆ ತೊಂದರೆಯಾಗುತ್ತದೆ. ಉಸಿರಾಡಿಸುವಾಗ ಗಂಟಲು ಮತ್ತು ಕಂಠನಾಳದಲ್ಲಿ ಶಬ್ದ ಬರುತ್ತದೆ. ಕೆಂಪು ರಕ್ತ ಕಣಗಳ ಸಂಖ್ಯೆ ಕಡಿಮೆ

ಆಗುತ್ತವೆ. ಬಿಳಿ ರಕ್ತ ಕಣಗಳ ಸಂಖ್ಯೆ ಹೆಚ್ಚುವುದು, ಕುತ್ತಿಗೆ ದಪ್ಪವಾಗುತ್ತದೆ. ಲೋಮನಾಳಗಳಲ್ಲಿ ರಕ್ತಸ್ರಾವವಾಗುತ್ತದೆ. ಲಿಂಫ್ ಗ್ರಂಥಿಗಳ ಜೊತೆಗೆ ವೃದ್ಧಿಸ್ಥಿಗಳು ದಪ್ಪವಾಗುತ್ತದೆ. ಶ್ವಾಸನಾಳ ಮತ್ತು ಕೋಶಗಳ ಉರಿಯೂತದಿಂದಾಗಿ ರೋಗಿ ಸಾಯುತ್ತಾನೆ.

## ಪ್ರತಿಬಂಧಕ ಉಪಾಯಗಳು

ರೋಗಿಯನ್ನು ವೈದ್ಯರ ಬಳಿ ಕರೆದುಕೊಂಡು ಹೋಗಬೇಕು. ಗಂಟಲು ಮೂಗನ್ನು ಪರೀಕ್ಷಿಸಬೇಕು. ಪೆನ್ಸಿಲ್ ಔಷಧಿಯನ್ನು ಕೊಡಬೇಕು. ರೋಗಿಯನ್ನು ಈ ದಿನಗಳಲ್ಲಿ ಪ್ರತ್ಯೇಕವಾಗಿಡಬೇಕು.



## ಚಿಕಿತ್ಸೆಗಳು

ಎರಡು ವಾರಗಳ ವಿಶ್ರಾಂತಿ ಅವಶ್ಯ ಉಪ್ಪಿನ ನೀರಿನಿಂದ ಬಾಯಿ ಮುಕ್ಕಳಿಸಬೇಕು. ರಕ್ತದಲ್ಲಿ ಸಕ್ಕರೆ ಅಂಶ ಕಡಿಮೆಯಾದರೆ ಗ್ಲುಕೋಜನ್ನು ಕೊಡಬೇಕು. ಪೌಷ್ಟಿಕವಾದ ಆಹಾರ ಕೊಡಬೇಕು. ಕತ್ತಿನ ಮೇಲೆ ಮಂಜುಗಡ್ಡೆಯನ್ನಿಡಬೇಕು. ರೋಗ ಉಗ್ರವಾಗಿದ್ದರೆ ಶ್ವಾಸನಾಳದ ಮೇಲೆ ಶಸ್ತ್ರ ಕ್ರಿಯೆಯನ್ನು ನಡೆಸುತ್ತಾರೆ. ಈ ಪ್ರಸಂಗದಲ್ಲಿ ಕೃತಕನಾಳವನ್ನು ಜೋಡಿಸುತ್ತಾರೆ. ಮಕ್ಕಳಿಗೆ ರೋಗ ಬರುವುದಕ್ಕೆ ಮೊದಲೇ ಗಂಟಲು ಬೇನೆಯ ರೋಗ ನಿರೋಧಕ ಚುಚ್ಚುಮದ್ದನ್ನು ಕೊಡಿಸಬೇಕು. ಜಾತ್ರೆ, ಸಮಾರಂಭ, ಪಾಠಶಾಲೆ, ಆಸ್ಪತ್ರೆ, ಜನಸಮೂಹ ಭೋಜನ ಮಂದಿರ ಮುಂತಾದ ಸ್ಥಳಗಳಲ್ಲಿ ಗಂಟಲು ಬೇನೆ ಕಂಡರೆ, ಅಂಥವರನ್ನು ಕರೆದೊಯ್ದು ಚಿಕಿತ್ಸೆ ಮಾಡಿಸಬೇಕು. ಈ ರೋಗದ ಲಕ್ಷಣಗಳು ತಿಳಿದು ಬಂದ ನಂತರ ಕೂಡಲೇ ತಜ್ಞ ವೈದ್ಯರನ್ನು ಕಂಡು ಯೋಗ್ಯ ಚಿಕಿತ್ಸೆಯನ್ನು ಕೊಡಿಸಬೇಕು. ರೋಗ ನಿವಾರಣೆಯಾಗುವ ತನಕ ರೋಗಿಯನ್ನು ಉಪಚರಿಸಬೇಕು. ಉಪಚಾರ ಮಾಡುವವರಿಗೆ ಸೋಂಕು ತಗುಲದಂತೆ ಕ್ರಮಗಳನ್ನು ತೆಗೆದುಕೊಳ್ಳಬೇಕು.